ಮನೋಹರ ಗ್ರಂಥಮಾಲೆಯ ೮೪ ನೆಯ ಕುಸುಮ

# ಚಿತ್ರದ ಬೆಳೆ

( ಸಾಮಾಜಿಕ ಅವಿದ್ಧ ಪ್ರಯೋಗ )

ಬರೆದವರು :

ಕೋ. ಶಿ. ಕಾರಂತ

ಜೂನ್ ೧೯೪೭

ಮನೋಹರ ಗ್ರಂಥ ಪ್ರಕಾಶನ ಸಮಿತಿ
ಧಾರವಾಡ

ಸಾಹಿತ್ಯ ವಿಷಯದಲ್ಲಿ ಸಲಹೆಗಾರರು :

ಶ್ರೀ. ದ. ರಾ. ಬೇಂದ್ರೆ, ಎಂ. ಎ.
ಶ್ರೀ. ವಿ. ಕೃ. ಗೋಕಾಕ, ಬಿ. ಎ. ( ಆಕ್ಸಫರ್ಡ )
ಶ್ರೀ. ರಂ. ಶ್ರೀ. ಮುಗಳಿ, ಎಂ. ಎ., ಬಿ. ಟಿ.

ಸಂಪಾದಕ :
ಜಿ. ಬಿ. ಜೋಶಿ



ಬೆಲೆ : ಒಂದು ರೂಪಾಯಿ

ಪ್ರಕಾಶಕರು :
ಜಿ. ಬಿ. ಜೋಶಿ
ಮನೋಹರ ಗ್ರಂಥ ಮಾಲಾ
ಧಾರವಾಡ

ಮುದ್ರಕರು :
ವಿ. ವಾಯ್. ಜಠಾರ
ಕರ್ನಾಟಕ ಪ್ರಿಂಟಿಂಗ ವರ್ಕ್ಸ
ಧಾರವಾಡ

# ನಮ್ಮ ಮಾತು

**‘ ತಾಯಿ ’ಯ ಬದಲು ‘ ಬಿತ್ತಿದ ಬೆಳೆ ’**

ಮೊದಲೆ ನಮ್ಮ ಗ್ರಾಹಕರಿಗೆ ತಿಳಿಸಿದಂತೆ ಈ ವರ್ಷದ ಕೊನೆಯ ಪುಸ್ತಕವಾಗಿ ಶ್ರೀ ಕೃಷ್ಣಕುಮಾರರು ಬರೆದುಕೊಡಲೊಪ್ಪಿದ ‘ ತಾಯಿ ’ ಎಂಬ ಕಾದಂಬರಿಯು ಪ್ರಕಟವಾಗಬೇಕಾಗಿತ್ತು. ಆದರೆ ನಿರೀಕ್ಷಿಸಿದ ಅವಧಿಯೊಳಗಾಗಿ ಅನಿವಾರ್ಯ ಆಪತ್ತಿಗಳ ಮೂಲಕ ಅವರಿಂದ ಹಸ್ತ ಪ್ರತಿಯನ್ನು ಸಂಪೂರ್ಣ ಬರೆದು ಮುಗಿಸುವುದು ಸಾಧ್ಯವಾಗಲಿಲ್ಲ. ಆದುದರಿಂದ ಅವರ ಗ್ರಂಥದ ಬದಲು, ಮುಂದೆ ಕೊಡಬೇಕೆಂದು ನಿಶ್ಚಯಿಸಿದ್ದ ಶ್ರೀ. ಕಾರಂತರ ಈ ‘ ಬಿತ್ತಿದ ಬೆಳೆ ’ಯನ್ನು ಈಗಲೇ ಪ್ರಕಟಿಸಬೇಕಾಯಿತು. ಗ್ರಾಹಕರು ಮನ್ನಿಸಬೇಕು.

**‘ ಬಿತ್ತಿದ ಬೆಳೆ ’ ಮತ್ತು ‘ ಏರಿಳಿತ ’**

ಈ ವರ್ಷದ ಕೊನೆಯ ಕುಸುಮ ‘ ಬಿತ್ತಿದ ಬೆಳೆ ’ ಒಂದೇ ಎಂದು ನಮ್ಮ ಗ್ರಾಹಕರು ಭಾವಿಸಬಾರದು. ಶ್ರೀ. ಕಾರಂತರ ‘ ಬಿತ್ತಿದ ಬೆಳೆ ’ ಅಲ್ಲದೆ ಶ್ರೀ. ಗೋಕಾಕರ ‘ ಇಜ್ಜೋಡಿ ’ನ ಮುಂದಿನ ಭಾಗವಾದ ‘ ಏರಿಳಿತ ’ ಎಂಬದೂ ಇದೇ ವರ್ಷದಲ್ಲಿ ನಮ್ಮ ಗ್ರಾಹಕರಿಗೆ ಸಲ್ಲಬೇಕಾದ ಗ್ರಂಥವಾಗಿ ಪ್ರಕಟವಾಗುವುದು. ‘ ಬಿತ್ತಿದ ಬೆಳೆ ’ಯ ಜತೆಗೇ ‘ ಏರಿಳಿತ ’ವನ್ನೂ ಕಳುಹಿಸಬೇಕೆಂದು ಮಾಡಿದ ಪ್ರಯತ್ನಗಳೆಲ್ಲಾ ವಿಫಲವಾದುವು. ಅಂತೆಯೆ ಈಗ ‘ ಬಿತ್ತಿದ ಬೆಳೆ ’ಯೊಂದನ್ನೇ ಕಳುಹಿಸಿ ಆ ನಂತರ ಹೊಸ ವರ್ಷದ ಗ್ರಂಥವನ್ನೂ ಅದರ ಹೊತ್ತಿಗೆ ಅದನ್ನು ಕಳುಹಿಸಿ, ಆಮೇಲೆ ಸೆಪ್ಟೆಂಬರ ತಿಂಗಳ ಕೊನೆಯ ವಾರದಲ್ಲಿ ‘ ಏರಿಳಿತ ’ವನ್ನು ಈಗಿದ್ದ ಗ್ರಾಹಕರಿಗೆಲ್ಲ ಕಳುಹಿಸುವ ಏರ್ಪಾಡು ಮಾಡಿಕೊಂಡಿದ್ದೇವೆ. ಈ ವರ್ಷದಲ್ಲಿ ಚಂದಾದಾರರಿದ್ದು ಹೊಸ ವರ್ಷಕ್ಕೆ ಬಿಟ್ಟವರಿಗೂ ಕೂಡ ಅವರಿಗೆ ಸಲ್ಲಬೇಕಾದ ‘ ಏರಿಳಿತ ’ವನ್ನು ಕಳುಹಿಸಿ ಕೊಡಲಾಗುವುದು.

ಈ ವರ್ಷದಲ್ಲಿ ಭಗ್ನಮಂದಿರ ೩೪೩ ಪುಟ, ದೇವತಾ ಮನುಷ್ಯ ೨೨೨ ಪುಟ, ಯುಗಾಂತರ ೮೭ ಪುಟ, ಬಿತ್ತಿದ ಬೆಳೆ ೧೨೪ ಪುಟ, ಅಂತೂ ಒಟ್ಟು ೭೭೫ ಪುಟಗಳನ್ನು ಇಲ್ಲಿಯ ವರೆಗೆ ನಮ್ಮ ಗ್ರಾಹಕರಿಗೆ ಸಲ್ಲಿಸಿದಂತಾಗಿದೆ. ಇನ್ನುಳಿದ ೧೨೫ ಪುಟಗಳದ್ದೇ ‘ ಏರಿಳಿತ. ’ ಅದು ಸೆಪ್ಟೆಂಬರ ತಿಂಗಳಲ್ಲಿ ಕೈಸೇರುವುದು.

**ರಾಷ್ಟ್ರಪುರುಷ**

ಭಾರತದ ಸ್ವಾತಂತ್ರ್ಯಕ್ಕಾಗಿ ಕಾಂಗ್ರೆಸ್ಸು ಹೂಡಿದ ಮೂರು ಮೆಟ್ಟಲಿನ ಮೂರೂ ಹೋರಾಟಗಳನ್ನು ಅತಿರಂಜನೆಯ ಸೋಂಕಿಲ್ಲದೆ ಎದೆಮುಟ್ಟುವಂತೆ ಚಿತ್ರಿಸಿದ ೭೨೦ ಪುಟಗಳ ಒಂದು ಮಹಾ ಕಾದಂಬರಿಯನ್ನು ಭಾರತ ಸ್ವಾತಂತ್ರ್ಯವನ್ನು ಪಡೆದ ಶುಭ ಮುಹೂರ್ತದಲ್ಲಿಯೆ ನಾವು ಪ್ರಕಟಿಸುತ್ತಿರುವುದಕ್ಕಾಗಿ ನಮಗೆ ಅತ್ಯಂತ ಅಭಿಮಾನವೆನಿಸುತ್ತಿದೆ, ಆನಂದವೆನಿಸುತ್ತಿದೆ. ಅದನ್ನು ಓದಿದ ಪ್ರತಿಯೊಬ್ಬ ಕನ್ನಡಿಗನ ಕೆಚ್ಚು ಬೆಳೆಯಲಿ, ಒಳಗಿನ ಅಭಿಮಾನ ಜಾಗೃತವಾಗಿ ಅದು ರಾಷ್ಟ್ರಾಭಿಮುಖವಾಗಿ ಮುಂದರಿಯಲಿ ಎಂದು ಹಾರೈಸುತ್ತೇವೆ.

**ಅನ್ನ**

ಭಾರತಸ್ವಾತಂತ್ರ್ಯದ ಹೋರಾಟವನ್ನು ಚಿತ್ರಿಸುವ ಕಾದಂಬರಿ 'ರಾಷ್ಟ್ರಪುರುಷ'ವಾದರೆ ಉಳ್ಳವರು ನಿರ್ಮಿಸಿದ ಭಾರತದ ಬಡತನವನ್ನೂ, ಹೊಸ ಯುದ್ಧದ ಶಸ್ತ್ರಾಸ್ತ್ರದಂತೆ ರಾಜಕಾರಣ ನಿರ್ಮಿಸಿದ ಅಮಾನುಷ ಬರಗಾಲವನ್ನೂ ಎದೆ ನಡುಗುವಂತೆ ಚಿತ್ರಿಸಿ ತೋರಿಸುವ ಈ ಇನ್ನೊಂದು ದೊಡ್ಡ ಕಾದಂಬರಿಯನ್ನೂ ಮುಂದಿನ ವರ್ಷದಲ್ಲಿಯೆ ಪ್ರಕಟಿಸಲಿದ್ದೇವೆಂದು ತಿಳಿಸಲು ನಮಗೆ ಇನ್ನೂ ಅಭಿಮಾನವೆನಿಸುತ್ತಿದೆ.

**ಹೊಸ ವರ್ಷದ ಚಂದಾ**

ಇದೇ ಅಗಸ್ಟದಿಂದ ಪ್ರಾರಂಭವಾಗುವ ಹೊಸ ವರ್ಷದಿಂದ ೫-೧೨-೦ ಇದ್ದ ಚಂದಾ ಹಣವನ್ನು ೭-೮-೦ ಗೆ ಹೆಚ್ಚಿಸಲಾಗಿದೆ. ಅದರಂತೆ ಸ್ಥಳಿಕ ಚಂದಾ ೪-೮-೦ ಇದ್ದುದನ್ನು ೫-೮-೦ ಮಾಡಲಾಗಿದೆ. ಮುದ್ರಣದ ವೆಚ್ಚ ಒಂದಕ್ಕೆ ನಾಲ್ಕರಷ್ಟು ಹೆಚ್ಚಾಗಿದ್ದರಿಂದ, ಕಾಗದದ ಧಾರಣೆ ಇನ್ನೂ ಏರಿಕೆಯಲ್ಲಿಯೆ ಇರುವುದರಿಂದ ಈಗಿದ್ದ ಚಂದಾ ಹಣದಲ್ಲಿಯೇ ಇಷ್ಟು ಪುಟಗಳನ್ನು ಒದಗಿಸುವುದು ಅಸಾಧ್ಯವಾಯಿತು. ಅಂತೆಯೆ ಅನಿವಾರ್ಯವಾಗಿ ಚಂದಾ ಹಣವನ್ನು ಹೆಚ್ಚಿಸಬೇಕಾಯಿತು. ಕಳೆದ ಹದಿನಾಲ್ಕು ವರ್ಷಗಳಿಂದಲೂ ಅಭಿಮಾನದಿಂದ ಸಹಾಯ ಮಾಡುತ್ತ ಬಂದಂತೆಯೆ ಇನ್ನು ಮುಂದೆಯೂ ನೆರವಿತ್ತು ಗ್ರಾಹಕರು ಪ್ರೋತ್ಸಾಹಿಸಬೇಕೆಂದು ಬೇಡುತ್ತೇವೆ.

ಭಾರತವು ಸ್ವತಂತ್ರ ರಾಷ್ಟ್ರವಾಗಿ ತಲೆಯೆತ್ತಿ ಮೆರೆಯುವ ದಿನ ವನ್ನು ನಾವೀಗ ಕಣ್ಣಾರೆ ಕಾಣುತ್ತಿದ್ದೇವೆ. ರಾಷ್ಟ್ರನಾಯಕರು ರಾಜ್ಯ ಸೂತ್ರಗಳನ್ನು ಜೋಡಿಸುತ್ತಿದ್ದಾರೆ. ಎಲ್ಲಾ ಪರಿಸ್ಥಿತಿ ಹದಗೊಂಡು ಒಂದು ಸ್ಥಿಮಿತಕ್ಕೆ ಬಂದು ಈಗಿದ್ದ ಪ್ರತಿಯೊಂದು ಪದಾರ್ಥದ ಧಾರಣೆಯು ಏರಿಕೆ, ಇಳಿತಕ್ಕೆ ಬಂದಲ್ಲಿ ಮತ್ತೆ ಚಂದಾ ಹಣವನ್ನಾದರೂ ಕಡಿಮೆ ಮಾಡಬಹುದು; ಇಲ್ಲವೆ ಇದೇ ಹಣಕ್ಕೆ ಸರಿಯಾಗುವಂತೆ ಪುಟ ಸಂಖ್ಯೆಯನ್ನಾದರೂ ಹೆಚ್ಚಿಸಬಹುದು. ಆ ಕಾಲ ಬೇಗನೆ ಬರಲಿ ಎಂದು ಹಾರೈಸುತ್ತೇವೆ.

ಚಂದಾದಾರರಲ್ಲಿ

ಹೊಸ ವರ್ಷದ ಚಂದಾ ಹಣವನ್ನು (೬-೮-೦) ಅಗಸ್ಟ ೧೫ ರೊಳಗಾಗಿ ನಮಗೆ ತಲುಪುವಂತೆ ಕಳುಹಿಸಿಕೊಡಬೇಕೆಂದು ಈ ಮೊದಲೆ ವಿನಂತಿ-ಪತ್ರಗಳನ್ನು ಕಳುಹಿಸಿದ್ದೇವೆ. ಆ ಅವಧಿಯೊಳಗಾಗಿ ಚಂದಾ ಹಣ ಕಳುಹಿಸಲು ಅನಾನುಕೂಲವಿದ್ದವರು, ಮತ್ತು ಹೊಸ ವರ್ಷಕ್ಕೆ ಚಂದಾದಾರರಾಗಿ ಮುಂದುವರಿಸಲು ಅನುಮತಿಯಿಲ್ಲದವರು ದಯ ವಿಟ್ಟು ಮೊದಲೇ ಬರೆದು ತಿಳಿಸಬೇಕಾಗಿ ಬೇಡುತ್ತೇವೆ. ಚಂದಾರರಾಗಿ ಮುಂದುವರಿಸಲು ಒಪ್ಪಿಗೆಯಿದ್ದವರು ಉತ್ತರವನ್ನೇನೂ ಬರೆಯಬೇಕಾ ಗಿಲ್ಲ. ಅವರ ಮೌನವೇ ಅವರ ಒಪ್ಪಿಗೆಯೆಂದು ಭಾವಿಸಿ ಪ್ರತಿಸಲದಂತೆ ಹೊಸ ವರ್ಷದ ಗ್ರಂಥವನ್ನು ಚಂದಾ ಹಣಕ್ಕೆ ಅವರಿಗೆ ವ್ಹಿ. ಪಿ.ಯಿಂದ ಕಳುಹಿಸಲಾಗುವುದು. ಅವರು ಅದನ್ನು ಸ್ವೀಕರಿಸಬೇಕಾಗಿ ಬೇಡುತ್ತೇವೆ.

ಶತಗ್ರಂಥ ಪೂರ್ತಿ

ಈಗ ಕೈಗೆ ಬಂದ ಈ 'ಬಿತ್ತಿದ ಬೆಳೆ'ಯು ಗ್ರಂಥವಯಲೆಯ ೮೪ ನೆಯ ಕುಸುಮ. ಮುಂದೆ ಬರಲಿರುವ 'ರಾಷ್ಟ್ರಪುರುಷ'ವು ೮೫, ೮೬, ೮೭, ೮೮, ೮೯ನೆಯ ಗ್ರಂಥಗಳ ಸಂಯುಕ್ತ ಸಂಪುಟ. ಆ ಮುಂದಿನ 'ಅನ್ನ'ವು ೯೦ ನೆಯದು. ನೂರು ಗ್ರಂಥಗಳು ಗ್ರಂಥಮಾಲೆಯಿಂದ ಮುಗಿಯುವುದಕ್ಕೆ ಇನ್ನು ಹತ್ತೇ ಗ್ರಂಥಗಳು ಬರಬೇಕು. ಈ ಹತ್ತು ಗ್ರಂಥಗಳಲ್ಲಿ ಹೆಚ್ಚಾಗಿ ನಾಟಕಗಳನ್ನ ಸೇರಿಸಬೇಕೆಂಬ ಯೋಚನೆಯಿದೆ. ಹೀಗೆ ಮಾಡುವದರಲ್ಲಿ ಇನ್ನೂ ಒಂದು ಆಶೆಯನ್ನಿಟ್ಟುಕೊಂಡಿದ್ದೇವೆ.

ರೂಪಾಂತರ ಹೊಂದುತ್ತಿರುವ ಈಗಿನ ಸಮಾಜದಲ್ಲಿಯ ಹೊಸ ಜೀವನ ವನ್ನೂ ಅದರ ಆಶೆ-ಆಕಾಂಕ್ಷೆಗಳನ್ನೂ ರೂಢವಾಗಿದ್ದ ಹಿಂದಿನ ಕಲ್ಪನೆಗಳ ಹೊಸ ನೆಲೆ-ಬೆಲೆಗಳನ್ನೂ ಎತ್ತಿ ತೋರಿಸುವ ಹೊಸ ತಂತ್ರದ, ಹೊಸ ಕಲ್ಪನೆಯ ನಾಟಕಗಳನ್ನು ಧೀಮಂತ ಲೇಖಕರಿಂದ ಬರೆಯಿಸಿ ಮಾಲೆಯಲ್ಲಿ ಪ್ರಕಟಿಸುವುದಲ್ಲದೆ ಒಳ್ಳೆಯ ಕಲಾವಿದರಿಂದ ನಟರಿಂದ ಆ ನಾಟಕಗಳನ್ನು ರಂಗಭೂಮಿಯ ಮೇಲೆ ಅಭಿನಯಿಸಿ ತೋರಿಸುವ ಸಾಹಸವನ್ನೂ ಕೈಕೊಳ್ಳುವ ನಿಶ್ಚಯ ಮಾಡಿದ್ದೇವೆ. ಆ ದಿಶೆಯಲ್ಲಿ ಮಾಡಿದ ಪ್ರಯತ್ನದ ಫಲವಾಗಿಯೇ ಈ 'ಬಿತ್ತಿದ ಬೆಳೆ' ಮತ್ತು 'ಯುಗಾಂತರ' ಬಂದಿವೆ. ಇವನ್ನು ಬೇಗನೆ ರಂಗಭೂಮಿಯ ಮೇಲೆ ತರುವ ಕಾರ್ಯದಲ್ಲಿ ತೊಡಗಿದ್ದೇವೆ.

ಶ್ರೀ. ದ. ರಾ. ಬೇಂದ್ರೆ, ಎ. ಎನ್. ಮೂರ್ತಿರಾಯರು, ರಂ. ಶ್ರೀ. ಮುಗಳಿ, ಎಲ್. ಜೆ. ಬೇಂದ್ರೆ, ಜಡಭರತ ಮೊದಲಾದವರು ಹೊಸ ನಾಟಕಗಳನ್ನು ಬರೆದು ಕೊಡಲು ಒಪ್ಪಿದ್ದಾರೆ.

ಹೀಗೇ ಏನೇನೊ ಕನಸುಗಳನ್ನು ಕಾಣುತ್ತಿದ್ದೇವೆ. ಎಲ್ಲಾ ರೂಪ ವೆತ್ತು ಪ್ರತ್ಯಕ್ಷವಾಗಿ ಕಣ್ಣೆದುರು ನಿಲ್ಲಬೇಕಾದರೆ ಆ ಯೋಜಕನ ಯೋಜಕನ ಪುಣ್ಯ, ಶಕ್ತಿ ಎಷ್ಟಿದೆಯೋ ಅಷ್ಟೇ ಆದೀತೆ ಹೊರತು ಹೆಚ್ಚಾಗಲಿಕ್ಕಿಲ್ಲ ಎಂಬ ಅರಿವೂ ನಮಗಿಲ್ಲದಿಲ್ಲ. ಆ ದಿವ್ಯ ಶಕ್ತಿ ಎಲ್ಲವನ್ನೂ ಕಾರ್ಯಕ್ಕಿಳಿಸುವ ಬಲವನ್ನು ದಯಪಾಲಿಸಲಿ !

## ಕೃತಜ್ಞತೆ

ಎಂದಿನಿಂದಲೂ ನಾನು ಕೈಕೊಂಡ ಕಾರ್ಯಗಳಿಗೆಲ್ಲ ಸಹಾನುಭೂತಿಯಿಂದ ಸಹಾಯ ಮಾಡುತ್ತ ಬಂದ ಶ್ರೀಮಾನ್ ಕಾರಂತರು ನಾನು ನನ್ನ ಈ ಆಶೆಯನ್ನು ವ್ಯಕ್ತಪಡಿಸಿದ ಕೂಡಲೆ ಒಪ್ಪಿಕೊಂಡು ಈ ಹೊಸ ತಂತ್ರದ, ಹೊಸ ಕಲ್ಪನೆಯ ನಾಟಕವನ್ನು ಬರೆದುಕೊಟ್ಟುದಕ್ಕಾಗಿ ಅವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ.

ಈ ನಾಟಕಕ್ಕೆ ಮುಖಚಿತ್ರ ತೆಗೆದುಕೊಟ್ಟ ಗೆಳೆಯ ರಾಘವೇಂದ್ರರಿಗೆ ಚಿರಋಣಿಯಾಗಿದ್ದೇನೆ.

—ಸಂಪಾದಕ

# ಪಾತ್ರ ಪರಿಚಯ



| | | |
|---|---|---|
| ಶಂಕರರಾವ್ | .. | ಸುಮಾರು ಐವತ್ತು ವರ್ಷ ಪ್ರಾಯದ ಕುಲೀನ ಗೃಹಸ್ಥ. ಉದ್ಯೋಗದಲ್ಲಿ ವಕೀಲ. ದಿನೇ ದಿನೇ ಕುಂದುತ್ತಿರುವ ಸಂಪಾದನೆಯನ್ನು ಇದಿರಿಸುತ್ತಿರಬೇಕಾದ ತಂದೆ. |
| ವಸಂತಿ | .. | ಶಂಕರರಾಯನ ಹೆಂಡತಿ. ಸುಮಾರು ನಾಲ್ವತ್ತು ವರ್ಷ ಪ್ರಾಯ. |
| ಸುಧಾಕರ | .. | ಶಂಕರರಾಯನ ಹಿರಿಯ ಮಗ. ಕಥೆಯ ಪ್ರಾರಂಭದಲ್ಲಿ ನಾಲ್ಕು ವರ್ಷ ಮೆಡಿಕಲ್ ಕಾಲೇಜ ಮುಗಿಸಿ ಮನೆಗೆ ಬಂದಿದ್ದಾನೆ. |
| ಸದಾಶಿವ | .. | ಶಂಕರರಾಯನ ಎರಡನೆಯ ಮಗ. |
| ಚಿದಾನಂದ | .. | ಶಂಕರರಾಯನ ಮೂರನೆಯ ಮಗ. |
| ಶ್ರೀಮತಿ | .. | ಶಂಕರರಾಯನ ಒಬ್ಬಳೆ ಮಗಳು. ಕಥೆಯ ಪ್ರಾರಂಭಕ್ಕೆ ಹದಿನಾರು ಹದಿನೇಳು ವಯಸ್ಸು. |

ರಾಮರಾವ್ .. ಅದೇ ಊರಿನ ಡಾಕ್ಟರು. ನಾಳೆ ಶಂಕರ ರಾಯರ ಬೀಗರಾಗುವವರು.

ಸುಲೋಚನಾಬಾಯಿ .. ರಾಮರಾಯರ ಹೆಂಡತಿ.

ರಾಜಾರಾಮ<br>ಶೇವಂತಿ<br>ಸೀಮಂತಿನಿ .. ರಾಮರಾಯರ ಮಕ್ಕಳು.

ಲಕ್ಷ್ಮಣ .. ಶಂಕರರಾಯರಲ್ಲಿ ಮೊದಲು ಅನ್ನಕ್ಕಿದ್ದ ಹುಡುಗ. ಈಗ ಬಿ. ಎ. ಮಾಡಿದ್ದಾನೆ.

ಶೇಷಗಿರಿ .. ಲಕ್ಷ್ಮಣನ ತಂದೆ. ತೀರ ಬಡತನದಿಂದ ಅಲ್ಲಿ ಇಲ್ಲಿ ತಿಂದು ಉಂಡು ಜೀವಿಸುತ್ತಿದ್ದ ವ್ಯಕ್ತಿ. ಈ ಕಥೆಯ ಕಾಲಕ್ಕೆ ಒಂದು ಅಂಗಡಿ ತೆಗೆದು ಶ್ರೀಮಂತನಾಗುತ್ತಾನೆ.

ಇನ್ನು

ಆಸ್ಪತ್ರೆಯ ಹುಡುಗ, ಅಂಚೆಯವ, ಶಂಕರರಾಯರಲ್ಲಿಗೆ ನೆಂಟಸ್ತಿಕೆಗೆ ಬರುವ ರಾಯರು ಇತ್ಯಾದಿ.

---

ನಾಟಕ ಸುಮಾರು ೧೯೪೦ ನೇ ಇಸ್ವಿಯ ವೇಳೆಗೆ ಪ್ರಾರಂಭವಾಗಿ ನಾಲ್ಕು ನಾಲ್ಕೂವರೆ ವರ್ಷಕ್ಕೆ ಕೊನೆಗೊಳ್ಳುವುದು. ಕೊನೆಗೊಳ್ಳುವಾಗ ಬರ್ಮಾ ಕಾಳಗ ಪ್ರಾರಂಭವಾಗುವುದು.

---

# ಬಿತ್ತಿದ ಬೆಳೆ

## ಮೊದಲನೆಯ ಅಂಕ

( ವಕೀಲ್ ಶಂಕರರಾಯರ ಮನೆಯ ಬೈಠಕಖಾನೆ. ಅಲ್ಲಿಂದ ವಕೀಲರ ಆಫೀಸಿಗೆ ಹೋಗಲು ಒಂದು ಬದಿ ಬಾಗಿಲು, ಮನೆಯ ಒಳಗಡೆ ಹೋಗಲು ಒಂದು ಬದಿ ಬಾಗಿಲು, ಶ್ರೀಮತಿಯ ಕೋಣೆಗೆ ಹೋಗಲು ಒಂದು ಬಾಗಿಲು, ಅನುಕೂಲ ಸ್ಥಳದಲ್ಲಿವೆ. ಕೋಣೆಯಲ್ಲಿ ನಾಲ್ಕು ಸುತ್ತು ಕುರ್ಚಿಗಳಿವೆ, ನಡುವೆ ಒಂದು ಟಿಪಾಯ್ ಇದೆ.)

ಸುಧಾಕರ — ಲಕ್ಷ್ಮಣ.... ಲಕ್ಷ್ಮಣ .... ಎಲ್ಲಿದ್ದಾನಪ್ಪಾ ಇವನು ? ಎಷ್ಟು ಕರೆದರೂ ಕೇಳಿಸುವುದಿಲ್ಲ. ರಜೆಯ ಸಮಯ ಮನೆಗೆ ಬಂದರೆ ದೊರೆಯ ಹಾಗೆ ತಿರುಗಾಡುತ್ತಿರುವುದೇ ಕಾಣುತ್ತದೆ! ಮನೆಯವರಿಗೆ ಒಂದು ಪ್ರಯೋಜನವಾಗಬೇಕು ಎಂಬ ಬುದ್ಧಿ ಇಲ್ಲ.

( ಈ ಕೂಗನ್ನು ಕೇಳಿ ಸುಧಾಕರನ ತಂಗಿ ಶ್ರೀಮತಿಯು ಅಲ್ಲಿಗೆ ಬರುವಳು )

ಶ್ರೀಮತಿ—ಏನಣ್ಣ ? ಕರೆದಿಯಾ ?

ಸುಧಾ—ನಿನ್ನನ್ನು ಕರೆಯಲಿಲ್ಲ. ಕರೆದದ್ದು ಆ ಮಹಾರಾಯನನ್ನು. ಗಂಟಲು ಒಡೆಯುವ ತನಕ ಕೂಗಿದರೂ ಅವನಿಲ್ಲ. ಎಲ್ಲಿಗೆ ಹೋಗಿದ್ದಾನೆ ಲಕ್ಷ್ಮಣ ? ರಜೆಯ ವೇಳೆ ಬೆಳಗಿನ ಸಮಯವೂ ತಿರುಗಾಡುತ್ತಿರಬೇಕೇ? ಹೌದು, ಮನೆಯಲ್ಲಿದ್ದರೆ ಏನಾದರೂ ಕೆಲಸ ಹೇಳುತ್ತಾರೆಂದು ಸರ್ಕೀಟಿಗೆ ಹೋಗಿರಬೇಕು.

ಶ್ರೀಮತಿ—ಇಷ್ಟರತನಕ ಇಲ್ಲಿಯೇ ಇದ್ದನಲ್ಲ ? ಸ್ವಲ್ಪ ಮೊದಲು ನೋಡಿದ್ದೆ. ನಿನಗೇನು ಬೇಕಿತ್ತು ? ನಾನು ತಂದು ಕೊಡುತ್ತೇನೆ.

ಸುಧಾ—ನೀನು ತರುತ್ತೀಯಾ ? ಆಗಲಿ, ಅಂಗಡಿಗೆ ಹೋಗಿ ಒಂದು ಪ್ರತಿ ಹಿಂದೂ ಪೇಪರ್ ತಾ. ಪರೀಕ್ಷೆಯ ರಿಜಲ್ಟ್ ಬಂದೀತೆಂದು ಕಾದು ಕುಳಿತರೆ, ಪೇಪರ್ ತಂದು ಕೊಡುವವರು ಬೇಕಲ್ಲ ?

ಶ್ರೀಮತಿ—ಪೇಪರಿಗೋ.... ನಿನಗೆ ಕುಡಿಯಲು ಚಾ, ಏನಾದರೂ ಬೇಕಾಯಿತೋ ಎಂದು ನೋಡಿದೆ

೨ ಬಿತ್ತಿದ ಬೆಳೆ

ಸುಧಾ—ಮತ್ತೇಕೆ? ನಿನಗೆ ಅವನ ವಕಾಲತು? ಲಕ್ಷ್ಮಣನ ಸುದ್ದಿ ಎತ್ತುವುದಕ್ಕಿಲ್ಲ, ನೀನು ಬಂದು ವಕಾಲತು ಮಾಡುತ್ತೀಯ.

ಶ್ರೀಮತಿ—ನಾನೇನು ವಕಾಲತು ಮಾಡಿದೆ? ಅವನನ್ನು ಸ್ವಲ್ಪ ಮೊದಲು ಕಂಡಿದ್ದೆ ಅಂದೆ. ಯಾರೋ, ಏನೋ ಬಟ್ಟೆ ಹಚ್ಚಿರಬೇಕು, ಹೋಗಿದ್ದಾನೆ.

ಸುಧಾ—ಸ್ವಲ್ಪ ಮೊದಲು ಕಂಡಿದ್ದಳಂತೆ! ನಾನು ಇಷ್ಟು ಹೊತ್ತಿನ ತನಕವೂ ಮನೆಯಲ್ಲೇ ಇದ್ದೆ. ಕಾಫಿ ಕುಡಿಯುವಾಗಲೂ ಅವನನ್ನು ಕಾಣಲಿಲ್ಲ. ಆಮೇಲೆಯೂ ಅವನನ್ನು ಕಾಣಲಿಲ್ಲ.

ಶ್ರೀಮತಿ—ಹಾಗಾದರೆ ನಾನು ಸುಳ್ಳು ಹೇಳುತ್ತೇನೆಯೋ?

ಸುಧಾ—ನೀನು ಹೇಳುವುದೇ ಸತ್ಯ. ನಾನು ಹೇಳುವುದೇ ಸುಳ್ಳು. ನಿನಗೆ ಅವನು ಮನೆಯಲ್ಲಿ ಇರಲಿ, ಇಲ್ಲದೆ ಇರಲಿ—ಸದಾ ಕಣ್ಣಿಗೆ ಕಾಣಿಸುತ್ತಲೇ ಇರುತ್ತಾನೆ. ಅವನದೇ ಧ್ಯಾನ ಮಾಡಿದರೆ ಹಾಗೇ ಆಗುತ್ತದೆ. ಅಪ್ಪ ವರಶೋಧನೆಗೆ ಇಷ್ಟೆಲ್ಲ ಯಾಕೆ ಒದ್ದಾಡುತ್ತಾನೆಯೋ ತಿಳಿಯದು. ಲಕ್ಷ್ಮಣನೇ ಇದ್ದಾನೆ–ನಿನ್ನ ಮೆಚ್ಚುಗೆಯುವನು.

ಶ್ರೀಮತಿ—ಹೌದು, ನನ್ನ ಮೆಚ್ಚುಗೆಯುವನು! ನೀನು ಒಬ್ಬನಿಗೆ ಅವನನ್ನು ನೋಡಿದರೆ ಆಗದೆಂದು ನಾನೂ ಅವನ ವೈರ ಸಾಧಿಸಬೇಕೇ? ಏನಾಯಿತೀಗ?—ಬೆಳಿಗ್ಗೆ ತಿರುಗಾಡಲು ಹೋದನೆಂದೇ ತಿಳಿಯುವ. ರಜೆಗೆ ಊರಿಗೆ ಬಂದಿದ್ದಾನೆ. ನಾಲ್ಕು ಜನ ಸ್ನೇಹಿತರನ್ನು ನೋಡಲು ಹೋಗಿರಬಹುದು. ಹಿಂದೆ ಒಂದು ನಾಲ್ಕು ವರ್ಷ ನಮ್ಮಲ್ಲಿ ಊಟ ಮಾಡಿದ್ದಾನೆ ಎಂದ ಮಾತ್ರಕ್ಕೆ ಅವನನ್ನು ಮನೆಯ ಜವಾನ ಎಂದು ತಿಳಿಯಬೇಕೆ? ನಿನಗೂ ಏನು ಕೆಲಸವಿಲ್ಲ. ಪೇಪರಿನ ಅಂಗಡಿಗೆ ಮೈಲೂ ಇಲ್ಲ, ಹರದಾರಿಯೂ ಇಲ್ಲ. ಹೋಗಿ ನೀನೇ ತರಬಹುದಲ್ಲಾ?

ಸುಧಾ—ನಾನು ವಕಾಲತು ಎಂದುದು ಇದನ್ನೇ. 'ಹಿಂದೂ' ಪೇಪರು ತರಿಸಿಕೊಂಡರೆ ಆಗುತ್ತಿತ್ತು, ಎಂದು ಹೇಳಿದರೆ ಅವನನ್ನು ಜವಾನನ್ನಾಗಿ ಮಾಡಿದ ಹಾಗಾಯಿತೇ? ಒಮ್ಮೆ ಹಾಗೆ ತಿಳಿದರೆ ತಪ್ಪೇನು? ಮೊನ್ನೆ ಮೊನ್ನೆಯತನಕ ನಮ್ಮಲ್ಲೇ ಉಂಡು ಬೆಳೆದ ಹುಡುಗ. ಆಳಾಗಿಯೇ ಬಂದವನು. ಈಗೇನು ಬಿ. ಎ. ಓದಿದ ಮಾತ್ರಕ್ಕೆ ಯಜಮಾನ

ಆಗುತ್ತಾನೆಯೋ ಮನೆಗೆ? ನಿನಗೆ ಬೇಕಾದರೆ ಅವನು ಯಜಮಾನ ನಾಗಲಿ. ನನಗೆ ಅವನು ಇನ್ನೂ ಆಳೇ.!

ಶ್ರೀಮತಿ—ಅಣ್ಣಾ, ನೀನು ಈ ರಜೆಗೆ ಮನೆಗೆ ಬಂದವನು ಹೀಗೆ ನನ್ನನ್ನು ಅವನನ್ನು ಕೆಣಕಲಿಕ್ಕೆ ತೊಡಗಿದ್ದೀಯಾ ಏತಕ್ಕೋ ನಾನು ತಿಳಿಯೆ. ಅವನು ಹೊಟ್ಟೆಗಿಲ್ಲದೆ ನಮ್ಮ ಮನೆಗೆ ಬಂದಿರಬಹುದು; ನಾವೂ ಅನ್ನ ಹಾಕಿರಬಹುದು; ಆದರೆ ಅವನನ್ನು ಕ್ರಯಕ್ಕೆ ಕೊಂಡಹಾಗಾಯಿತೇ? ನಾಲ್ಕು ಜನರ ಸಹಾಯದಿಂದ ಕಾಲೇಜಿಗೆ ಹೋಗುತ್ತಿದ್ದಾನೆ. ನೀನು ಎಲ್ಲರ ಎದುರಿಗೂ ಅವನನ್ನು 'ಲಕ್ಷ್ಮಣ ಅದನ್ನು ತಾ. ಇದನ್ನು ತಾ' ಎಂದರೆ ಹೇಗೆ ಅನಿಸೀತು? ಅವನಾದುದಕ್ಕೆ ಚಾಕಾರ ಇಲ್ಲದೆ ಮಾಡು ತ್ತಿದ್ದಾನೆ. ಇನ್ನು ಯಾರೂ ಮಾಡಲಾರರು. ನೀನು ಹೇಗು ಮಾಡಿದರೂ ನಡೆಯುತ್ತದೆ. ಆದರೆ ಅವನು ನಮ್ಮ ಮನೆಯ ಹಂಗಿನಲ್ಲೇ ಇದ್ದಾನೆಂದು ತಿಳಿಯಬೇಡ. ಹೇಗೂ ಸ್ವತಂತ್ರಜೀವನ ಮಾಡಿಕೊಂಡಾನು. ಒಮ್ಮೆ ಆಳಾಗಿ ಬಂದರೆ ಜೀವಮಾನವೆಲ್ಲಾ ಆಳೇ ಆಗಿರಬೇಕಲ್ಲವಷ್ಟೆ?

ಸುಧಾ—ಅದಕ್ಕೇ ಅಂದೆ: ಅವನು ಆಳೇ ಆಗಬೇಕಿಲ್ಲ. ನಿನ್ನ ಯಜಮಾನನನ್ನಾಗಿಯೇ ಮಾಡಿಕೊ.

ಶ್ರೀಮತಿ—ನನ್ನ ಯಜಮಾನರು ಆಗುವವರು ಆಗುತ್ತಾರೆ. ಅದೃಷ್ಟ ದಲ್ಲಿ ಇದ್ದ ಹಾಗೆ ಆಗುತ್ತದೆ. ಲಕ್ಷ್ಮಣ ಆಗುವ ಯೋಗವಿದ್ದರೆ ಅದೂ ಆಗುತ್ತದೆ. ಅವನೇನು ಅಂಥ ಅಪರಾಧ ಮಾಡಿಲ್ಲವಲ್ಲ?

ಸುಧಾ—ಅಪರಾಧ ಮಾಡುವವನೇ ಅಲ್ಲ; ಮಾತ್ರವಲ್ಲ ನಿನ್ನ ಒಲು ಮೆಗೂ ಪಾತ್ರನಾಗಿದ್ದಾನೆ—ಗೊತ್ತು. ಅವನು ರಜೆಯಲ್ಲಿ ಇಲ್ಲಿ ಬಂದು ಬೀಳುವುದು, ನಿನ್ನ ಸಲುವಾಗಿಯೇ ಎಂಬುದೂ ಗೊತ್ತು. ಊರಲ್ಲಿ ತಂದೆಯ ಮನೆ ಇರುವಾಗ ಇಲ್ಲಿ ಯಾಕೆ ಬಂದಿರಬೇಕು? ಊಟಕ್ಕೆ ಮಾತ್ರ ಈ ಮನೆ ಬೇಕು. ನಾವು ಚಾಕರಿ ಮಾತ್ರ ಹೇಳಕೂಡದು.

ಶ್ರೀಮತಿ—ಅಣ್ಣಾ, ನಿನಗೆ ಮಾತನಾಡಲು ತೊಡಗಿದರೆ ಏನು ಆಡ ಬಹುದು, ಏನು ಆಡಬಾರದು, ಎಂಬ ಗೊಡವೆ ಇಲ್ಲ. ಲಕ್ಷ್ಮಣ ನಮ್ಮ ಮನೆಗೆ ಬರುವುದು ನಿನ್ನ ಹೊಟ್ಟೆಸಂಕಟಕ್ಕೆ ಕಾರಣವಾದರೆ ಹಾಗೆಯೇ

ತಿಳಿಸಿಬಿಡು. ಈ ಬಳಸು ಮಾತೆಲ್ಲ ಏಕೆ ?

(ಅಷ್ಟರಲ್ಲಿಯೇ ಲಕ್ಷ್ಮಣನು ಹಿಂದೂ ಪತ್ರಿಕೆಯನ್ನು ತೆಗೆದುಕೊಂಡು ಬರುವನು)

ಸುಧಾ— ಮಹಾರಾಯ, ಬಂದಿಯೋ! ಬಂದು ಪೇಪರು ತರಿಸುವಾ ಎಂದು ಕೂಗಿದರೆ ನೀನು ಎಲ್ಲಿದ್ದಿಯೊ ?

ಲಕ್ಷ್ಮಣ— ನಾನು ಅದಕ್ಕೇನೆ ಹೋಗಿದ್ದೆ. ನಿನ್ನೆ ರಾತ್ರಿ ನೀನು ಅಂದಿರಲಿಲ್ಲವೆ ?

ಸುಧಾ—( ಪೇಪರು ಕಿತ್ತುಕೊಂಡು )

ಲಕ್ಷ್ಮಣ—ಅಲ್ಲ ಶ್ರೀಮತಿ ಅಂದದ್ದು-ನಾಳಿನ ಪೇಪರಿಗೆ ರಿಜಲ್ಟ್ ಬರುತ್ತದೆ ಎಂದು. ಅದಕ್ಕನೆ ಹೋಗಿ ಕಾದು ಕುಳಿತಿದೆ ಮೋಟರು ಬರುವಾಗ ತಡವಾಯಿತು.

ಸುಧಾ— ಹೋಗಲಿ ಬಿಡು, ಪತ್ರಿಕೆ ಬಂತಲ್ಲಾ ?

ಲಕ್ಷ್ಮಣ—ಯಾವ ನಂಬರು ನಿನ್ನದು ?

ಸುಧಾ—( ಆ ಮಾತಿಗೆ ಉತ್ತರ ಕೊಡದೆ ನಂಬರು ನೋಡಿ ಹಿಗ್ಗಿನಿಂದ) ಅಪ್ಪಾ.... !

ಲಕ್ಷ್ಮಣ— ಏನು, ಪಾಸಾದಿರಾ ?

ಸುಧಾ— ಪಾಸಾಗುತ್ತೇನೆಂದು ಗೊತ್ತೇ ಇತ್ತು. ಆದರೂ ಇನ್ನು ಒಬ್ಬಿಬ್ಬರ ನಂಬರ ನೋಡುವ ಕುತೂಹಲವಿತ್ತು. ನೋಡಿದೆ ಹೋಗು. ಅಪ್ಪನ ಹತ್ತಿರ ಹೇಳು ರಿಜಲ್ಟ್ ನಾನು ಹೇಳಿದ ಹಾಗೇ ಅಂತ.

(ಲಕ್ಷ್ಮಣ ಒಳಕ್ಕೆ ಹೋಗುವನು, ಶಂಕರರಾಯನನ್ನು ಕರೆದುಕೊಂಡೇ ಬರುವನು)

ಶಂಕರ—ಬಂತೇ ? ನಿನ್ನ ನಂಬರು ಬಂತೆ ?

ಸುಧಾ— ಬರಲೇಬೇಕು-ಅಷ್ಟು ಚೆನ್ನಾಗಿ ಮಾಡಿದ್ದೆ. ಹೇಗೂ ಮುಗಿಯಿತು ನಾಲ್ಕು ವರ್ಷದ ತಪಸ್ಸು. ಇನ್ನು ಒಂದು ವರ್ಷ ಮುಗಿದು ಬಿಟ್ಟರೆ ಬಚಾವು.

ಶಂಕರ—ಹಾಗಾದರೆ ಸುಧಾ ! ಡಾಕ್ಟರಿಗೆ ಹೇಳಿ ಕಳುಹಿಸಲೇ ? ನಿನ್ನ ರಿಜಲ್ಟಿಗಾಗಿ ಅವರೂ ಕಾದು ಕುಳಿತಹಾಗಿದೆ. ಅಂದರೆ ಅದು ಬರುವ ಮೊದಲು ನೆಂಟಸ್ತಿಕೆ ಪ್ರಸ್ತಾಪ ಬೇಡವೆಂದು ನಾನೇ ಹೇಳಿದ್ದೆ.

ಸುಧಾ—ನನ್ನ ಲಗ್ನಕ್ಕೆ ನಿನಗೇಕೆ ಅಷ್ಟು ಆತುರ ? ಶ್ರೀಮತಿಗೆ

ಲಗ್ನದ ಪ್ರಾಯ—ಅಲ್ಲದೆ ಮಗಳು, ಹುಡಿಗಿ ದೊಡ್ಡದಾಗಿದ್ದಾಳೆ ಎಂದು ಅಮ್ಮನೂ ಕೂಗುತ್ತಾಳೆ?

( ಶ್ರೀಮಂತಿ ಅಲ್ಲಿಂದ ಹೊರಟು ಹೋಗುವಳು )

ಶಂಕರ—ಅನುಕೂಲವಾದರೆ ಇಬ್ಬರಿಗೂ ಈ ವರ್ಷವೇ ಲಗ್ನ ಮಾಡಬೇಕೆಂದು ನನ್ನ ಉದ್ದೇಶ. ಇನ್ನು ಇನ್ನೂ ಈ ಯುದ್ಧದ ಸ್ಥಿತಿ ಮುಂದುವರಿದರೆ ಯಾವ ಸಾಮಾನು ಮುಟ್ಟುವುದೂ ಕಷ್ಟ. ನಾಳೆ, ನಾಳೆ ಎಂದು ಮುಂದುವರಿಸಿದರೆ ತುಂಬ ಕಷ್ಟವಾದೀತು. ಅವಳ ವಿಚಾರ ಬಿಡು. ಅದು ಹೇಗೂ ಆಗುತ್ತದೆ. ನೀನು ಡಾಕ್ಟರ ಮಗಳನ್ನು ನೋಡಿರಬೇಕು. ನಮ್ಮ ಶ್ರೀಮಂತಿಗಿಂತ ಎರಡು ವರ್ಷಕ್ಕೆ ದೊಡ್ಡವಳು. ಅವಳಿಗೆ ಈ ವರ್ಷ ಇಂಟರ ಆಯಿತೆಂದು ಕಾಣುತ್ತದೆ. ಅಲ್ಲದೆ ನಮ್ಮ ರಾಮರಾಯರಿಗೆ ಮೆಡಿಕಲ್ ಪ್ರಾಕ್‌ಟೀಸ್ ಬಹಳ ಚೆನ್ನಾಗಿದೆ. ನೀನು ಪರೀಕ್ಷೆ ಮುಗಿಸಿ ಬಂದು ಅವರ ಜತೆಗೆ ಸೇರಿಸಿಕೊಂಡರೆ ಸುಲಭವಾಗಿ ಮೇಲೆ ಬರಬಹುದು.

ಸುಧಾ—ನನ್ನ ವಿಷಯದಲ್ಲಿ ಅಂಥ ಚಿಂತೆ ಏನೂ ಇಲ್ಲ. ಮಾವನ ಆಶೀರ್ವಾದ ಪಡೆದು ಬದುಕಬೇಕೆಂತಲೇ ಇಲ್ಲ. ಅಪ್ಪಾ, ಯುದ್ಧದ ಸಮಯ ಇದು. ನೌಕರರಿಗೆ ಬರಗಾಲವೇ? ಏನು ಇಲ್ಲವೆಂದರೂ ವಾರ್ ಸರ್ವಿಸಿದೆ.

ಶಂಕರ—ನಿನಗೇನು ಹೇಳಬೇಕು ನಾನು? ನಮ್ಮ ಸುಖ ದುಃಖವನ್ನು ಸ್ವಲ್ಪವಾದರೂ ತಿಳಿಯಬೇಡವೆ? ಮನೆಯಲ್ಲಿರುವವನು ನೀನು ಒಬ್ಬನಾದರೆ ಸರಿಯೆ. ಮದುವೆ ಯೋಚನೆಯಿಂದ ಶ್ರೀಮತಿಯ ಓದು ಸಾಕೆಂದು ನಿಲ್ಲಿಸಿದರೂ, ಸದಾಶಿವನನ್ನು, ಚಿದಾನಂದನನ್ನು, ಕಾಲೇಜಿಗೆ ಕಳುಹಿಸದೆ ಗತಿ ಉಂಟೇ? ನನ್ನ ವಕಾಲತಿನಲ್ಲಿ ಏನು ಸಿಕ್ಕೀತು? ನೀನು ಒಬ್ಬನಿಗೆ ತಿಂಗಳಿಗೆ ಅರ್ವತ್ತು ಕಳುಹಿಸುತ್ತ ಬಂದೆ. ಚಿದಾನಂದ ಇಂಟರ, ಸದಾನಂದ ಬಿ. ಯುಸ್. ಸಿ. ಇವು ಎರಡಕ್ಕೆ ಇನ್ನೆಷ್ಟು ಬೇಡ? ಆಮೇಲೆ ಇಲ್ಲಿನ ಸಂಸಾರವು ನಡೆಯಬೇಕು. ನೀನೇ ವಿಚಾರಮಾಡು. ನನ್ನ ತಲೆಯ ಮೇಲಿನ ಹೊರೆಯನ್ನು ಸ್ವಲ್ಪವಾದರೂ ಇಳಿಸುವ ಪ್ರಯತ್ನ ಮಾಡಬೇಡವೇ?

( ಅಷ್ಟರಲ್ಲಿ ಶಂಕರರಾಯರ ಹೆಂಡತಿ ವಸಂತಿ ಅಲ್ಲಿಗೆ ಬರುವಳು )

ವಸಂತಿ, ನಿನ್ನ ಮಗನಿಗೆ ನೀನೇ ಸ್ವಲ್ಪ ಬುದ್ಧಿ ಹೇಳು. ಡಾಕ್ಟರರು ಈಗಲೇ ಓಡಿ ಬಂದಾರು ಅವನ ರಿಜಲ್ಟ್ ಬಂದದ್ದನ್ನು ನೋಡಿ. ಅವರ ಎದುರಿಗೆ ಪ್ರಸ್ತಾಪ ಬಂದಾಗ ಇವನೇನೂ ಅನ್ನದೆ ಇರಲಿ. ಅವರ ಮಗಳಿಗೇನಾಗಿದೆ? ರೂಪ, ವಿದ್ಯೆ, ಅನುಕೂಲತೆ ಎಲ್ಲಾ ಇದೆ. ವರದಕ್ಷಿಣೆ ಕೇಳಿದರೂ ಅಲ್ಲ ಎನ್ನುವವರಲ್ಲ. ನಮ್ಮ ಶ್ರೀಮಂತಿ ದೆಸೆಯಿಂದ ನಾನು ಅದನ್ನು ಕೇಳಲಿಲ್ಲ. ಇವನ ಲಗ್ನ ಈ ವರ್ಷವಾದರೆ ಇವನ ಖರ್ಚನ್ನು ಅವರು ನೋಡಿಕೊಂಡಾರು. ಆಗ ನನ್ನ ಮೇಲಿನ ಹೊರೆ ಕಡಿಮೆಯಾಗಿ ಉಳಿದ ಮಕ್ಕಳಿಗೆ ವಿದ್ಯೆಗೆ ಏನಾದರೂ ದಾರಿ ಆದೀತು. ಹಾಗೆಂದು ಇವನನ್ನು ಮಾತನಾಡಿಸಿದರೆ ಯಾಕೆ ಈ ಅವಸರ ಎನ್ನುತ್ತಾನೆ ಇವನು.

ವಸಂತಿ—ಅದೇನು ಸುಧಾ? ನಾನು ಕೇಳಿದರೂ ಹಾಗೇ ಅನ್ನುತ್ತಿದ್ದೀಯ! ಏನು ಮೆಡಿಕಲ್ ಕಾಲೇಜಿನಲ್ಲಿ ಯಾರನ್ನಾದರೂ ನೋಡಿಕೊಂಡಿದ್ದೀಯಾ-ಜಾತಿ ಗೀತಿ ಏನೂ ನೋಡದೆ?

ಸುಧಾ—ಹೌದು. ಮೆಡಿಕಲ್ ಕಾಲೇಜು ಮಾಡಿದ್ದೇ ಅದಕ್ಕೆ. ಅದೊಂದು ಸ್ವಯಂವರಶಾಲೆ ಅಲ್ಲವೆ?

ವಸಂತಿ—ಅಲ್ಲ ಮಗು. ಯಾರದು? ಮೊನ್ನೆ ಮೊನ್ನೆ ನಿನ್ನ ಕ್ಲಾಸಿನ ಹುಡುಗ ನಿಮ್ಮ ಕಾಲೇಜಿನ ಹುಡುಗಿಯನ್ನು ಮದುವೆ ಆದನಂತಲ್ಲಾ? ಇವನು ಯಾವುದೋ ಜಾತಿ, ಅವಳು ಯಾವುದೋ ಜಾತಿ ಎಂದು ನೀನೇ ಹೇಳಿದಿಯಲ್ಲಾ, ನೀನೂ ಹಾಗೆಲ್ಲಿಯಾದರೂ ಮಾಡಿಬಿಟ್ಟರೆ ನಮ್ಮ ಗತಿ? ನೀನು ನೆಗಾಡಬೇಡ. ಇವತ್ತು ಡಾಕ್ಟರು ಬರಲಿಕ್ಕೂ ಸಾಕು. ನಾನು ಅವರ ಹೆಂಡತಿ ಮಕ್ಕಳನ್ನು ಊಟಕ್ಕೆ ಕರೆದಿದ್ದೇನೆ ಮಧ್ಯಾಹ್ನಕ್ಕೆ.

ಸುಧಾ— ಅಯ್ಯೋ ಅಮ್ಮ! ನನಗೋಸ್ಕರ ನೀನು ಯಾಕೆ ಇಷ್ಟು ಗೋಳಾಡುವುದು? ಮದುವೆ ಎಂದಾಗಬೇಕೆಂದು ತಿಳಿಯಲಾರದಷ್ಟು ಮಗುವೆ ನಾನು?

ಶಂಕರ—ಅಂದರೆ ಇನ್ನೂ ಒಂದು ವರ್ಷದ ದಂಡ ನಾನೇ ತೆರಬೇಕು ಅನ್ನುತ್ತೀಯಾ? ಅದನ್ನು ತೆರುತ್ತೇನೆ. ಅರ್ಧದಲ್ಲಿ ನಿಲ್ಲಿಸುವದಿಲ್ಲ. ಆದರೆ ನಿನಗೂ ಕೊಟ್ಟು ನಿನ್ನ ತಮ್ಮಂದಿರಿಗೂ ಕೊಡುವ ಯೋಗ್ಯತೆ ನನಗಿಲ್ಲ. ಅವರನ್ನು ಕಾಲೇಜು ಬಿಡಿಸಿ ನೌಕರಿ ಹುಡುಕುವುದಕ್ಕೆ ಕಳು

ಹಿಸಬೇಕು. ಈಗಲೇ ದಿನಹರಣ ಮಾಡುವುದು ಕಷ್ಟವಾಗಿದೆ. ಮೂರು ಮಂದಿಯನ್ನು ಕಾಲೇಜಿಗೆ ಕಳುಹಿಸಿದರೆ ನಾನು ಕುತ್ತಿಗೆಯ ವರೆಗೆ ಸಾಲ ಮಾಡಬೇಕಾದೀತು. ದೇವರು ಬುದ್ಧಿ ಕೊಟ್ಟ ಹಾಗೆ ಮಾಡು.

ಸುಧಾ—ನೀನು ಅಪ್ಪಾ, ಥಟ್ಟನೆ ಏನಾದರೂ ಹೇಳಿ ಬಿಡುತ್ತೀಯಾ! ಮದುವೆ ಎಂದುಬಿಟ್ಟರೆ ಆ ಕ್ಷಣವೇ ಉತ್ತರ ಕೊಡಬೇಕೆಂದು ಹೇಳಿದರೆ ಹೇಗೆ? ನಾನು ಏನೂ ಯೋಚನೆ ಮಾಡುವ ಅಂಶವಿಲ್ಲವೆ? ನನಗೆ ಯಾರಿಗೆ ಹೊರೆಯಾಗಿರುವುದಕ್ಕೂ ಇಷ್ಟವಿಲ್ಲ. ನನಗಾಗಿ ತಮ್ಮಂದಿರ ವಿದ್ಯೆ ಹಾಳು ಮಾಡಬೇಕಂತಲೂ ನಾನು ಹೇಳುವುದಿಲ್ಲ. ಸ್ವಲ್ಪ ವಿಚಾರ ಮಾಡುವುದಕ್ಕೆ ಅವಕಾಶ ಕೊಡು. ಗಡಿಬಿಡಿ ಯಾಕೆ ಇಷ್ಟು? ಶ್ರೀಮಂತರು ವಿಷಯ ಗಡಿಬಿಡಿ ತೋರಿಸಿದರೆ ಅರ್ಥವಿದೆ. ದಿನ ಹೋದ ಹಾಗೆ ವರ ಶೋಧನೆಯ ಕೆಲಸ ಕಷ್ಟವಾದೀತು ಎಂದು ತಿಳಿಯಬಹುದು.

ಶಂಕರ—ನೀನು ಅದನ್ನು ಒಪ್ಪಿದರೆ ಅದು ಸುಲಭವಾಗುತ್ತದೆ. ಅವರಿಗೂ ಹುಡುಗನಿಲ್ಲವೇ? ಅದಕ್ಕಾಗಿ ನಾನು ವರದಕ್ಷಿಣೆಯ ವಿಚಾರ ಮಾತನಾಡಲಿಲ್ಲ. ಸಾಟಿ ಮದುವೆಯಾದರೂ ಆದೀತು. ನೀನು ಕಲ್ಲು ಹಾಕಿದರೆ ಎರಡೂ ತಪ್ಪುತ್ತದೆ. ವಿಚಾರ ಮಾಡು....ಹೂಂ, ನನಗೆ ಕೋರ್ಟಿಗೆ ಹೊತ್ತಾಯಿತು. ಪೇಪರ ನೋಡಿ ಡಾಕ್ಟರು ಓಡಿ ಬಂದರೆ ಏನು ಗತಿ? ಅಲ್ಲದೆ ಇವಳು ಅವರನ್ನೆಲ್ಲ ಊಟಕ್ಕೆ ಕರೆದಿದ್ದಾಳಂತೆ. ಟೀಗೋ ಊಟಕ್ಕೋ?

ವಸಂತಿ—ಟೀಗೆ ಕರೆದರೆ ಏನು ಸರಿಯಾಗುತ್ತೆ? ಊಟಕ್ಕೇ ಬನ್ನಿ ಅಂದೆ.

ಶಂಕರ—ಒಟ್ಟಾರೆ ಅವರ ಮುಂದೆ ನನ್ನ ಮುಂದೆ ಅಂದ ಹಾಗೆ ಅನ್ನ ಬೇಡ. ವಿಚಾರ ಮಾಡಿ ಬೇಗನೆ ತಿಳಿಸುತ್ತೇನೆ ಎಂದಾದರೂ ಹೇಳು. ಅವರ ಹುಡುಗಿಯೂ ಬಂದಾಳು. ಎಂಥವರೂ ಮೆಚ್ಚುವ ಕನ್ಯೆ! (ಎಂದು ತೆರಳುವನು)

ಸುಧಾ—ಹೋ, ಹಾಗೆ ಸಾಟಿ ಲಗ್ನದ ವಿಚಾರ ಇದ್ದು! ಶ್ರೀಪತಿಗೆ ಒಂದು ವರ ಬೇಕಾಗಿದೆ, ನಾನು ಅವರ ಮಗಳನ್ನು ಮದುವೆಯಾದರೆ ಅವಳಿಗೆ ಒಂದು ಗಂಡ ಸುಲಭದಲ್ಲಿ ಸಿಗುತ್ತಾನೆಂದು ನಿಮ್ಮ ಯೋಚನೆ ಹಾಗೆನ್ನಿ. ಆದರೆ ಅಮ್ಮಾ, ಒಂದು ಮಾತು ಖಂಡಿತ ಹೇಳುತ್ತೇನೆ. ನೀವೂ

ನನ್ನ ಕೊರಳನ್ನು ಕೊಡಬಹುದು. ನಿಮ್ಮ ದಾಕ್ಷಿಣ್ಯಕ್ಕೆ ನಾನೂ ಹೂಂ ಅನ್ನಬಹುದು. ಆದರೆ ನಿಮ್ಮ ಸಾಟೀ, ಗೀಟೆ ಲಗ್ನದ ಕನಸು ಮಾತ್ರ ಇರಿಸಿಕೊಳ್ಳಬೇಡಿ.

ವಸಂತಿ—ಅಂದರೆ ಡಾಕ್ಟರು ಒಪ್ಪಲಾರರು ಅನ್ನುತ್ತೀಯಾ? ಸುಲೋಚನಾಬಾಯಿಯನ್ನು ನಾನು ಮಾತನಾಡಿಸಿ ನೋಡಿದ್ದೇನೆ. ಶ್ರೀಮತಿಯನ್ನು ಸೊಸೆಯಾಗಿ ಮಾಡಿಕೊಳ್ಳಲು ಅವರಿಗೆ ಕುತ್ತಿಗೆಯ ತನಕ ಆಸೆಯಿದೆ.

ಸುಧಾ—ಆಸೆ ಕುತ್ತಿಗೆ ವರೆಗೂ ಇದ್ದೀತು. ಮೂಗಿನ ವರೆಗೂ ಇದ್ದೀತು. ಆದರೆ ನೀವೆಲ್ಲಾದರೂ ಯೋಚನೆ ಮಾಡದೆ ಮಾತು ಕೊಟ್ಟರೆ, ನಿಮ್ಮ ಕುತ್ತಿಗೆಗೂ ಬಂದೀತು. ಬೇರೆ ನನಗೇಕೆ... (ಹೊರಡುವವನಂತೆ ನಟಿಸುತ್ತಾನೆ)

ವಸಂತಿ—ಏನು ಸುಧಾ? ಹೀಗೆನ್ನುತ್ತೀ? ಏನೊ ಅನ್ನುವಹಾಗಿದೆ ನೀನು. ಸಮನಾಗಿ ಹೇಳಬಾರದೆ?

ಸುಧಾ—ಸಮನಾಗಿ ಹೇಳದೆ ಏನು? ಹಾಗೆ ಸಮನಾಗಿ ಹೇಳಿದರೆ ಎಲ್ಲರಿಗೂ ನಾನು ಕೆಟ್ಟವನಾಗಿ ಕಾಣಿಸಬಹುದು.

ವಸಂತಿ—ಅಂದರೆ!

ಸುಧಾ—ಅಂದರೆ ನೀವು ಮೊದಲು ಶ್ರೀಮತಿಯನ್ನು ಕೇಳಿ ಆ ಮೇಲೆ ನಿಮ್ಮ ಕನಸು ಕಟ್ಟಬಹುದು ಎಂದು ಕಾಣುತ್ತದೆ.

ವಸಂತಿ—ಅವಳನ್ನು ಕೇಳುವುದೇ? ಅವಳಿಗೇನು ತಿಳಿದಿದೆಯಂತೆ ಪಾಪ–ನಾವು ಹೂಂ ಎಂದರೆ, ಅವಳೂ ಹೂಂ ಎಂದಾಳು.

ಸುಧಾ—ಓ ಅಷ್ಟು ಧೈರ್ಯವಿದೆಯೇ! ತಾಯಿಗೆ ಅಂಥ ಮಗಳ ಮೇಲೆ ಅಭಿಮಾನ ಇರುವುದು ಸಹಜವೆ. ನನಗೂ ತಂಗಿಯ ಮೇಲೆ ಪ್ರೀತಿ, ಅಭಿಮಾನ ಎಲ್ಲವೂ ಇದೆ. ಆದರೆ ನೀವು ಅವಳನ್ನು ಬೆಳೆಯಿಸಿಟ್ಟ ರೀತಿಯಲ್ಲಿ ನಿಮ್ಮ ಮಾತು ನಡೆದೀತು ಎಂಬ ಧೈರ್ಯ ಮಾತ್ರ ನನಗಿಲ್ಲ.

ವಸಂತಿ—ಇದೇನು ಸುಧಾ! ಹಾಗೇಕೆ ಹೇಳುತ್ತಿ?

ಸುಧಾ—ನಾನು ಏನೂ ಹೇಳುವುದಿಲ್ಲ. ತಿಳಿದುದನ್ನು ಹೇಳುವುದು ತಪ್ಪು. ಅದಕ್ಕಾಗಿ ನೀವೇ ಅದನ್ನು ತಿಳಿದುಕೊಳ್ಳುವುದು ಲೇಸು. ಇಷ್ಟೆ

ಹಾನೆನ್ನುವುದು: ಅವಳನ್ನು ಕೇಳಿ, ಅವಳು ಒಪ್ಪಿದರೆ ಮಾತ್ರ ಮಾತನ್ನು ಮುಂದುವರಿಸಿ?

ವಸಂತಿ—ಯಾಕೆ ಅವಳು ಒಪ್ಪಳೆಂದೇ?

ಸುಧಾ—ಏನು ಶ್ರೀಮತಿ ಇನ್ನೂ ಮಗುವೆಂದು ತಿಳಿದಿದ್ದೀಯಾ? ಅಮ್ಮಾ, ಇದೆಲ್ಲ ನಿನ್ನ ಪ್ರಾಚೀನ ಕಾಲವಲ್ಲ. ಇದು ನಿಮ್ಮ ಕಾಲವಲ್ಲ. ಹೊಸ ಯುಗ. ಪ್ರೇಮ, ಶೃಂಗಾರಗಳ ಯಾಗ.

ವಸಂತಿ—ಅಂದರೆ ಬೇರೆ ಯಾರನ್ನಾದರೂ ಮದುವೆಯಾಗುವ ಯೋಚನೆ ಬಂದಿದೆಯೇ ಅವಳಿಗೆ? ಛೀ ಇರಲಾರದು. ಪಾಪ ಅವಳಾಯಿತು, ಅವಳ ಶಾಲೆಯಾಯಿತು, ಅವಳ ಮನೆಯಾಯಿತು. ನಾಲ್ಕು ಕಡೆಗೆ ಹೋಗುವವಳೂ ಅಲ್ಲ.

ಸುಧಾ—ಸರಿ, ಹಾಗಿದ್ದರೆ ನನ್ನನ್ನು ಕೇಳಬೇಕಾಗಿಲ್ಲ.

ವಸಂತಿ—ಅಂದರೆ ಹೊರಗೆ ಯಾರನ್ನಾದರೂ........!

ಸುಧಾ—ಹೊರಗೇಕೆ? ಮನೆಯಲ್ಲಿಯೇ ಅಳಿಯನಾಗುವವನ್ನು ತಂದು ಇರಿಸಿಕೊಂಡಿದ್ದೀರಿ ನೀವು. ನಿಮಗೂ ಅವನು ಮುದ್ದೇ ಅಲ್ಲವಾದರೆ ತಂದೆಯ ಮನೆ ಇಷ್ಟು ಸಮೀಪವಿರುತ್ತ ಇಲ್ಲಿ ಹಗಲು ರಾತ್ರಿ ಬಿದ್ದಿರುತ್ತಾನೆ ಯಾಕೆ? ಕಣ್ಣು ತೆರೆದು ನೋಡಿದರೆ ನಿನಗೂ ತಿಳಿಯುತ್ತಿತ್ತು. ಒಂದು ಗಳಿಗೆ ಇವಳು ಅವನನ್ನು ಬಿಟ್ಟಿರುವುದಿಲ್ಲ, ಅವನು ಇವಳನ್ನು ಬಿಟ್ಟಿರುವುದಿಲ್ಲ!

ವಸಂತಿ—ಛೀ, ನೀನು ಮರುಳ! ಲಕ್ಷ್ಮಣ, ಮನೆಯಲ್ಲಿ ಬೆಳೆದ ಹುಡುಗ. ನಮ್ಮ ಮನೆಯ ಚಾಕರಿ ಮಾಡಿದವನು. ಸಣ್ಣಂದಿನಿಂದಲೂ ಅವಳನ್ನು ಎತ್ತಿ ತಿರುಗಾಡಿಸಿದವನು. ನಮ್ಮ ಮನೆಯ ಮೇಲಿನ ಅಭಿಮಾನದಿಂದ ರಜೆಯಲ್ಲೆಲ್ಲ ಬಂದು ಹೋಗುತಾನೆ. ನಾನೂ ಬಾ ಅಂದಿದ್ದೇನೆ. ಒಂದಲ್ಲ ಒಂದು ಕೆಲಸಕ್ಕೆ ಒದಗುವ ಹುಡುಗ. ಅಷ್ಟಕ್ಕೆ ನೀನು ಇಷ್ಟೆಲ್ಲ ದೊಡ್ಡದು ಮಾಡಿದರೆ?

ಸುಧಾ—ನನ್ನದಲ್ಲ ಊಹೆ, ಕಲ್ಪನೆ ಎಂದೇ ತಿಳಿಯುವ. ನಿಜಕ್ಕೂ ಅವಳು ಅವನನ್ನೆ ಮದುವೆಯಾಗುತ್ತೇನೆಂದು ಹೇಳಿದರೆ ಏನು ಮಾಡುವವರು ನೀವು?

ವಸಂತಿ—ಛೀ, ಎಲ್ಲಿನ ಮಾತು! ಮನೆಗೆ ಅನಾಥನಾಗಿ ಬಂದಿದು ನಮ್ಮ ಚಾಕರಿ ಮಾಡಿಕೊಂಡಿದ್ದವನನ್ನು ಮದುವೆಯಾಗುತಾಳೆಯೇ—ಜಾತಿಯ ಹುಡುಗನೆಂದ ಮಾತ್ರಕ್ಕೆ ?

ಸುಧಾ—ಆ ಗ್ರಹಿಕೆ ಅವಳಿಗಿದ್ದರೆ ಸಮ. ಅವಳು ಹಾಗೆ ಹಟ ಹಿಡಿದರೆ ನೀವು ಲಕ್ಷ್ಮಣನನ್ನು ಅಳಿಯನನ್ನಾಗಿ ಮಾಡಿಕೊಳ್ಳಲು ಒಪ್ಪುವವಳಲ್ಲವೆ?

ವಸಂತಿ—ಸ್ವಲ್ಪ ಮೆಲ್ಲನೆ ಮಾತನಾಡು. ಯಾರಿಗಾದರೂ ಕೇಳಿಸಿದರೆ ಇಲ್ಲದ ಸುದ್ದಿ ಒಂದು ಹರಡುವುದಕ್ಕೆ ದಾರಿ ಮಾಡಿ ಕೊಟ್ಟಹಾಗಾದೀತು.

ಸುಧಾ—ನಿನಗೆ ಆ ಹೆದರಿಕೆ ಇದ್ದರೆ ಮೊದಲು ಅವಳಿಗೆ ಬುದ್ಧಿ ಹೇಳು. ಲಕ್ಷ್ಮಣನನ್ನು ಎಲ್ಲಿ ಇರಿಸಬೇಕೊ ಮೊದಲು ಅಲ್ಲಿ ಇರಿಸು. ನಾನು ಬರಿಯ ಅಂದಾಜು, ಊಹೆಯ ಮೇಲೆ ಹೇಳುವ ಮಾತಲ್ಲ ಇದು. ಹಿಂದಿನ ರಜೆಯಲ್ಲಿ ಬಂದಾಗಲೂ ಅವರನ್ನು ನೋಡಿದ್ದೇನೆ. ಈಗಿನ ರಜೆಯಲ್ಲಿಯೂ ಅದನ್ನು ಪರೀಕ್ಷಿಸಿದ್ದೇನೆ. ನಾವು ಯಾರಾದರೂ ಲಕ್ಷ್ಮಣನಿಗೆ ಒಂದು ಕೆಲಸ ಹೇಳಿದರೆ ಅವಳಿಗೆ ಎಲ್ಲಿಲ್ಲದ ಕೋಪ ಬರುತ್ತದೆ. ಗಂಡನಾಗುವವನ ಮೇಲಿನ ಅಭಿಮಾನ ಆ ರೀತಿಯಲ್ಲಿರುವುದು ಸಹಜ. ಅವರಿಬ್ಬರ ರೀತಿ ನೀತಿಗಳು ಬದಲಾಗಿವೆ. ನೀನು ಲಕ್ಷ್ಮಣ ಪಾಪ—ನಿಮ್ಮ ಮಗಳು ಮುದ್ದು ಎಂದು—ತಿಳಿದಿರಬಹುದು. ನನಗೆ ಹಾಗೆ ಎಷ್ಟೂ ಕಾಣಿಸುವುದಿಲ್ಲ. ಊರಿಗೂ ಈ ಸುದ್ದಿ ಗೊತ್ತಿಲ್ಲ ಎಂದು ತಿಳಿಯಬೇಡ ನಾನು ಇದನ್ನು ಕೇಳಿದ್ದು ಮೊದಲು ಹೊರಗಿನವರ ಬಾಯಿಂದಲೇ. ಆ ಮೇಲೆ ನನ್ನ ಪರೀಕ್ಷೆಗೂ ಅದು ನಿಜವೆಂದು ಕಂಡಿತು. ಎಂದೋ ಹೇಳಬೇಕೆಂದಿತ್ತು ನನಗೆ ಈ ವಿಷಯವನ್ನು. ಆದರೆ ನಾನು ಘಟಿಂಗನಾದೇನು; ಅಲ್ಲದೆ ನಿಮ್ಮ ಇಷ್ಟವೂ ಹಾಗಿದ್ದರೆ ನಾನು ಒಬ್ಬನೇ ಯಾಕೆ ನಿಷ್ಠುರ ಕಟ್ಟಿಕೊಳ್ಳಬೇಕು? ಎಂದು ಸುಮ್ಮನಾದೆ.

ವಸಂತಿ—ನಿಜವೆ ಮಗು? ಅವರಿಗೆ ತಿಳಿದರೆ ಏನು ಮಾಡಿಯಾರು? ಲಕ್ಷ್ಮಣ ಅಂಥ ಹುಡುಗನಲ್ಲಾ ಎಂದು ತಿಳಿದಿದ್ದೆ

ಸುಧಾ—ಅವನ ಪ್ರಾಯ ಅಂತಹದು. ನಿಮಗೆ ಬುದ್ಧಿ ಇಲ್ಲದೆ

ಮೊದಲಿನ ಸಲಿಗೆಯನ್ನೆ ಇಂದು ಕೊಟ್ಟು ಕುಳಿತಿರಿ. ಅವನಾದರೂ ತನ್ನ ಸ್ಥಾನಮಾನ ತಿಳಿದಿರಬೇಕಿತ್ತು. ಹಿಂದೆ ಆದದ್ದಕ್ಕೆ ಏನು ಮಾಡು ವಂತೆಯೂ ಇಲ್ಲ. ಇನ್ನಾದರೂ ಎಚ್ಚರವಾಗಿರಿ. ಮೊದಲು ಹೇಳು ತ್ತೇನಲ್ಲ-ಡಾಕ್ಟರ ಮನೆಯವರ ಎದುರಿಗೆ ಏನು ಮಾತನಾಡುವುದಕ್ಕೂ ಮೊದಲು ಅವಳ ಮನಸ್ಸನ್ನು ತಿಳಿದುಕೊಂಡೇ ಮುಂದರಿಸಿ. ನಾಳೆ ನಮ್ಮ ಮರ್ಯಾದೆ ಹೋಗಬಾರದಲ್ಲಾ?

ವಸಂತಿ—ನಿಜವೇ ನಿನ್ನ ಮಾತು. ಹೀಗೆಲ್ಲಾದರೂ ಆದರೆ ಊರು ಜನ ಏನೆಂದಾರು? ಮನೆಯ ಆಳಿಗೆ ಮಗಳನ್ನು ಕಟ್ಟಿದರು ಎಂದಾರು. ನಾವು ಮನಃಪೂರ್ವಕವಾಗಿ ಲಗ್ನ ಮಾಡಿದರೂ ಊರಿನ ಜನ ಏನೇನು ಸುದ್ದಿ ಹಬ್ಬಿಸಿಯಾರು. ಹೂಂ ಅವನು ಬಂದ— ಸುಮ್ಮನಿರು.

ಲಕ್ಷ್ಮಣ—(ಅಲ್ಲಿಗೆ ಬರುತ್ತಾನೆ) ಅಮ್ಮಾ, ಸುಧಾರಾಯರು ಪಾಸಾ ದುದಕ್ಕೆ ನಮಗೆ ಇವತ್ತು ಗಮ್ಮತ್ತಿನ ಊಟ ಇಲ್ಲವೇ? ಅಡುಗೆ ಮನೆ ಯಿಂದಲೋ ಏನೇನೊ ಪರಿಮಳ ಬರುತ್ತಿತ್ತು.

ವಸಂತಿ—ಊಟಕ್ಕೇನು ತಾಪತ್ರಯ? ನಿತ್ಯವೂ ಇದೆ ಅದನ್ನೆ ಗಮ್ಮತ್ತಿನಲ್ಲಿ ಉಂಡರಾಯಿತು. ಸಮನಾದ ಗಮ್ಮತ್ತು, ಗದ್ದಲ ಎಲ್ಲ ಐದನೆಯ ವರ್ಷ ಪೂರ್ಣವಾದ ಮೇಲೆ. ಇರಲಿ ಲಕ್ಷ್ಮಣ, ನೀನು ಡಾಕ್ಟರ್ ರಾಮರಾಯರ ಮನೆಗೆ ಹೋಗಿ ಅವರು ಇಲ್ಲಿಗೆ ಎಷ್ಟು ಹೊತ್ತಿಗೆ ಬರು ತ್ತಾರೆ, ಬೇಗ ಹೊರಡುತ್ತಾರೆಯೋ ಹೇಗೆ, ಎಂದು ಕೇಳಿ ಬಾ.

ಲಕ್ಷ್ಮಣ—ಆಗಲಿ ಅಮ್ಮಾ (ಹೊರಡುವನು)

ಸುಧಾ—ನೋಡಿದೆಯಾ ಅಮ್ಮಾ! ನೀನು ಮಾತ್ರ ಅವನನ್ನು ಆಳೂ ಎಂದು ತಿಳಿದಿರಬೇಕು. ಅವನು ಇದು ಯಜಮಾನರ ಮನೆ ಎಂದು ತಿಳಿಯಲೇ ಇಲ್ಲ. ಅವನಿಗೆ ಬಿ. ಎ. ಓದುತ್ತಿದ್ದರೇನು, ನಮ್ಮ ಹತ್ತಿರ ಮಾತನಾಡುವುದಕ್ಕೆ ಒಂದು ರೀತಿ ಬೇಡವೇ? ಜಾತಿಯ ಹುಡುಗ ನೆಂದು ಅವನನ್ನು ಸರಿಯಾದ ಸ್ಥಾನದಲ್ಲಿರಿಸುವುದಕ್ಕೆ ನಿಮಗೂ ಅಳುಕು.

ವಸಂತಿ— ಅದು ಇರಲಿ ಮಗು, ಈ ಸುಲೋಚನಾಬಾಯಿ ಬಂದು ಪ್ರಸ್ತಾಪ ತೆಗೆದರೆ ಸಾಟಿ ಮದುವೆಯೆಂದು ಹಟ ಹಿಡಿದರೆ ನಾನು ಏನು ಮಾಡಬೇಕು ಹೇಳು? ಅವಳ ವಿಚಾರ ಹೇಗೂ ಇರಲಿ ನೀನು ಮಾತ್ರ

ಒಲ್ಲೆ ಅನ್ನಬೇಡ. ಮಗಳನ್ನು ಕರೆದುಕೊಂಡು ಬರುತ್ತಾರೆ. ನಿನಗೆ ಒಪ್ಪದ ಜತೆಯೂ ಅಲ್ಲ.... ಗೊತ್ತಾಯಿತೇ ನಾನು ಹೇಳಿದ್ದು. ಅವರ ಮಗಳು ಸೇವಂತಿಯೂ ಬರುತ್ತಾಳೆಂದು ಹೇಳಿದೆ.

ಸುಧಾ—ನಿನಗೆ ನನ್ನ ಚಿಂತೆಯೇ ಆಯಿತಲ್ಲ. ಸೇವಂತಿ ಬಂದರೆ ತಲೆಯ ಮೇಲೆ ಮುಡಿಯಬೇಕು ಅನ್ನುತ್ತೀಯಲ್ಲವೇ? ಆಯಿತು ಮತ್ತೇನು? ನಿಮ್ಮ ತಾಪತ್ರಯ ಕಷ್ಟ ಎಲ್ಲಾ ನನಗೆ ಗೊತ್ತು. ಆದರೆ ನನ್ನ ಯೋಚನೆಯನ್ನು ಬಿಟ್ಟು ಶ್ರೀಮತಿಯ ವಿಚಾರ ಗಟ್ಟಿ ಮಾಡಿಕೊ. ಅವರೊಡನೆ ಮಾತನಾಡು ಮೊದಲು.

ವಸಂತಿ—ಶ್ರೀಮತಿ (ಎಂದು ಕರೆಯುವಳು.)

(ಶ್ರೀಮತಿ ಬರುತ್ತಾಳೆ.)

ವಸಂತಿ—ಏನು ಶ್ರೀಮತಿ ಇದು? ಕೈಯಲ್ಲಿ ಚಾ ಹಿಡಿದು ತಿರುಗಾಡುತ್ತಿದ್ದೀಯ!

ಶ್ರೀಮತಿ—ಲಕ್ಷ್ಮಣ ಎಲ್ಲಿ? ಬೆಳಿಗ್ಗೆಯೂ ಅವನು ಕಾಫಿ ಕುಡಿಯಲಿಲ್ಲ. ಎಲ್ಲೆಲ್ಲಿಗೊ ಕಳುಹಿಸಿದಿರಿ. ಈಗ ಬಂದ ಎಂದು ಚಾ ಮಾಡಿದರೆ ಅಷ್ಟರಲ್ಲೆ ತಿರುಗಿ ಕಳುಹಿಸಿದಿರಾ?

ವಸಂತಿ—ಡಾಕ್ಟರ ಮನೆಗೆ ಹೋಗಿ ಬಾ ಅಂದೆ.

ಶ್ರೀಮತಿ—ಒಟ್ಟಿಗೆ ಮೇಲಿಂದ ಮೇಲೆ ಅವನು ಒಬ್ಬನ ಹತ್ತಿರವೇ ಕೆಲಸ ಹೇಳುವುದೇ?

ಸುಧಾ—ಪಾಪ ದಣಿದಾನು ಲಕ್ಷ್ಮಣ! ಎಳೆಯ ಮಗು, ಡಾಕ್ಟರ ಮನೆಗೆ ನಾನೇ ಹೋಗಿ ಬರುತ್ತೇನೆ ಅಮ್ಮಾ. (ಎಂದು ಹೊರಡುವನು.)

ಶ್ರೀಮತಿ—ನೀನು ಹೋಗುವುದಲ್ಲ ಗೊತ್ತು; ಅದೇನಮ್ಮ, ಅಣ್ಣ ಲಕ್ಷ್ಮಣನ ಹೆಸರು ಕೇಳಿದರೆ ನಂಜು ಕಾರುವುದು ಯಾಕೆ?

ವಸಂತಿ—ಸುಮ್ಮನಿರು; ಏನೋ ಚೇಷ್ಟೆಗೆ ಅಂದಿರಬಹುದು. ಚಾ ತೆಗೆದುಕೊಂಡು ಹೋಗಿ ಒಳಗಿಟ್ಟು ಬಾ. ಬಂದ ಕೂಡಲೆ ಕುಡಿಯುತ್ತಾನೆ. ಅಲ್ಲದೆ ನಿನ್ನನ್ನು ಏತಕ್ಕೊ ಕೇಳಬೇಕೆಂದಿದೆ ....

ಶ್ರೀಮತಿ—ನನ್ನನ್ನೇ? ಬಂದೆ. (ಒಳಕ್ಕೆ ಹೋಗಿ ಚಾ ಇಟ್ಟು ಬರುವಳು.)

ವಸಂತಿ—(ಅಷ್ಟರಲ್ಲಿ) ಇದೆಲ್ಲ ನೋಡುವಾಗ ಸುಧಾ ಅಂದದ್ದು ನಿಜವೇ ಎಂದು ಅನುಮಾನವಾಗುತ್ತದೆ.

ಶ್ರೀಮತಿ—(ಬರುವಳು) ಏನಮ್ಮ ಅದು ಹೇಳಬೇಕಂದದ್ದು? ಅಡಿಗೆ ಆಯಿತೇ? ಏನು ವಿಶೇಷ ಇವತ್ತು? ಸುಲೋಚನಾಬಾಯಿ, ಸೇವಂತಿ ಎಲ್ಲ ಬರುತ್ತಾರಂತೆ?

ವಸಂತಿ—ಹೌದು ಈಗ ಬರುತ್ತಾರೆ. ಬರುವುದೇಕೆ ಎಂದು ಗೊತ್ತಿದೆಯಲ್ಲವೇ ಮಗು?

ಶ್ರೀಮತಿ—ಊಟಕ್ಕೆ.

ವಸಂತಿ—ಹುಚ್ಚಿ! ಊಟಕ್ಕೆ ಎಂದುದರಿಂದಲೇ ಅಡಿಗೆ ಮಾಡಿಕಾದಿರುವುದು. ಅವರು ಬರುವುದು ಲಗ್ನದ ನಿಶ್ಚಯಕ್ಕೆ. ಅಣ್ಣ ಬಂದಿದ್ದಾನಲ್ಲಾ? ಆದ್ದರಿಂದ ಬಂದಿದ್ದಾರೆ. ಅವನಿಗೆ ಸೇವಂತಿಯನ್ನು ತೋರಿಸಬೇಕೆಂದು ಕರೆದು ತರುತ್ತಾರೆ.

ಶ್ರೀಮತಿ—ಅದಕ್ಕೆ ಒಳ್ಳೆಯದಾಯಿತು. ಸೇವಂತಿ ಏನು ನೋಡಲಿಕ್ಕೆ ಚೆನ್ನಾಗಿದ್ದಾಳೆ. ಇಂಟರ ಪರೀಕ್ಷೆ ಮಾಡಿದ್ದಾಳೆ. ಇನ್ನೇನು ಆಗಬೇಕು?

ವಸಂತಿ—ದೇವರು ನಡೆಯಿಸಿದರೆ ಸಾಟಿ ಲಗ್ನ ಮಾಡುವ ಯೋಚನೆ ನಮಗೂ ಅವರಿಗೂ. ಸುಲೋಚನಾಬಾಯಿಗೆ ನಿನ್ನನ್ನು ಸೊಸೆಯಾಗಿ ಮಾಡಿಕೊಳ್ಳಲು ಬಹಳ ಇಷ್ಟ.

ಶ್ರೀಮತಿ—ಈ ಅಮ್ಮನಿಗೆ ಒಟ್ಟಾರೆ ಚೇಷ್ಟೆ.

ವಸಂತಿ—ಚೇಷ್ಟೆ ಅಲ್ಲಮ್ಮ, ನಿಜಕ್ಕೂ ಹೇಳಿದ್ದು. ಇಲ್ಲವಾದರೆ ಅವರು ಒಪ್ಪುವುದೂ ಕಷ್ಟ. ಇದು ಆಗಿಬಿಟ್ಟರೆ ಇಬ್ಬರಿಗೂ ಯೋಚನೆ ತಪ್ಪಿತು. ನಾವು ಜಾತಕ ಮನೆ ಮನೆಗೆ ತೋರಿಸಿ ತಿರುಗಾಡಬೇಕಿಲ್ಲ. ನಿಮ್ಮ ಅಪ್ಪ ಎಷ್ಟೆಂದು ನಿಮ್ಮೆಲ್ಲರ ವಿದ್ಯೆಗೆ ಹಣ ಸುರಿದಾರು? ನಿನಗೂ ಒಳ್ಳೆಯ ಮನೆ ಸಿಕ್ಕುತ್ತದ್ದೆ..

ಶ್ರೀಮತಿ—ನನ್ನ ಆತುರ ಬೇಡ ಅಮ್ಮಾ, ಮದುವೆ ಮಾತು ಖಂಡಿತಕ್ಕೂ ಬೇಡ. ನನಗೆ ಇನ್ನೂ ಪ್ರಾಯವಾಗಿಲ್ಲ, ಲಗ್ನದ ಅವಸರವಿಲ್ಲ. ನಾನು ಈ ವರ್ಷ ಇಂಟರ್ ಓದಬೇಕು.

ವಸಂತಿ—ಇಂಟರ್ ಓದಬಾರದೆನ್ನುತ್ತೀವೆಯೋ ? ಅವರ ಮಗಳೂ ಓದಿದ್ದಾಳೆ. ಮದುವೆಯಾದ ಮೇಲೂ ಓದಬಹುದು.

ಶ್ರೀಮತಿ—ನನ್ನ ಸಂಗತಿ ಬೇಡವೆಂದೆನಲ್ಲಾ ? ಈಗ ನೀನು ಆ ವಿಷಯ ಮಾತನಾಡಲೇಬಾರದು.

ವಸಂತಿ—ನಾನು ಮಾತನಾಡಬಾರದೇ ? ತಂದೆ ತಾಯಿ ಮಾತನಾಡದೆ ಇನ್ನು ಯಾರು ಮಾತನಾಡಬೇಕು ? ನಿನ್ನ ಗಂಡನನ್ನು ನೀನೇ ಗೊತ್ತುಮಾಡಿಕೊಳ್ಳುವವಳೇ ?

ಶ್ರೀಮತಿ—ಯಾಕೆ ಅದೆಲ್ಲ ಸಲ್ಲದ ಮಾತು ? ನನಗೆ ಈಗ ಲಗ್ನ ಬೇಡ.

ವಸಂತಿ—ಲಗ್ನ ಈಗ ಬೇಡವೆಂದೇ ? ಇಲ್ಲವೆ ಅವರ ಹುಡುಗ ರಾಜಾರಾಮ ಬೇಡವೆಂದೆ ?

ಶ್ರೀಮತಿ—ನನ್ನನ್ನು ಕೇಳಬೇಡವೆಂದನಲ್ಲಾ; ಈಗ ನಾನು ಯಾವುದನ್ನೂ ಒಲ್ಲೆ ( ಎಂದು ಹೊರಡಲು ಅಣಿಯಾಗುವಳು.)

ವಸಂತಿ—ಶ್ರೀಮತಿ, ಏನು ಹೀಗಂದರೆ ? ನಿನ್ನ ಅಣ್ಣ ಹೇಳಿದ್ದನು. ನಾನು ಸುಳ್ಳೆಂದೇ ತಿಳಿದಿದ್ದೆ. ಈಗ ಅಲ್ಲಿಗೂ ಬಂದಿತೇ ?

ಶ್ರೀಮತಿ—( ಹಿಂತಿರುಗಿ ) ಹೋ, ಈಗ ಅಣ್ಣನ ಫಿರಿಯಾದಿ ನಿನ್ನ ತನಕವೂ ಬಂದಾಯಿತೋ ? ನಾನು ಲಕ್ಷ್ಮಣನ ವಕೀಲ ಎಂದು ಹೇಳಿರಬೇಕು ನಿನಗೆ. ಅಷ್ಟೇ ಅಲ್ಲವೇ–ಏನು ತಪ್ಪಾಗಲಾರದು.

ವಸಂತಿ—ಅಷ್ಟಲ್ಲ . . . . ನೋಡು ಮಗು, ಯಾವ ಕೆಲಸ ಮಾಡುವುದಾದರೂ ಹಿಂದು ಮುಂದು ವಿಚಾರಿಸಬೇಕು. ನಾವು ಏನಾದರೂ ಎಣಿಸಿಕೊಂಡು ಅದು ಇನ್ನೇನಾದರೂ ಆಗಬಾರದು. ಇದನ್ನೆಲ್ಲಾ ನಿನ್ನ ತಂದೆ ಕೇಳಿದರೆ ಸಿಟ್ಟಿನಿಂದ ಕುದಿದುಬಿಟ್ಟಾರು. ಅಯ್ಯೋ, ಈ ಗತಿ ಬಂತೇ ? ಅವನನ್ನು ಸಾಕಿದ್ದೆಂದರೆ ಹಾವಿಗೆ ಹಾಲು ಕೊಟ್ಟ ಹಾಗಾಯಿತು.

ಶ್ರೀಮತಿ—ಏನಾದರೂ ಅನ್ನಬೇಡ. ಅನ್ನುವ ಮಾತಿಗೆ ಚಂದವಾದರೂ ಬೇಕು. ಅಣ್ಣ ಹೇಳಿದ ಚಾಡಿಮಾತು ಕೇಳಿ ನೀನು ಏನೇನು ಅನ್ನಬೇಡ. ಇಷ್ಟು ದಿನ ಮನೆಯಲ್ಲಿದ್ದ ಲಕ್ಷ್ಮಣ ಈಗ ನಿನ್ನ ಪಾಲಿಗೆ

ಹಾವಾಗಿಬಿಟ್ಟನೇ? ನಿಮಗೆ ಅವನನ್ನು ಕಂಡರೆ ಆಗದೆ ಇದ್ದರೆ ಹೋಗಲಿ, ಸರ್ಪ, ಹಾವು ಅನ್ನುವುದು ಬೇಡ.

ವಸಂತಿ—ಇಲ್ಲ ಮಗು. ಅವನು ಒಳ್ಳೆಯವನೆಂದೆ ತಿಳಿಯುವ. ಆದರೆ ನೀನು ಏನಾದರೂ ಅವನ ಕನಸು ಹಿಡಿದುಕೊಂಡಿದ್ದರೆ ಅದನ್ನು ಮಾತ್ರ ಬಿಟ್ಟು ಬಿಡು. ನಿನಗೆ ಈ ಸಮ್ಮಂಧ ಬೇಡವಾದರೆ ಬಿಡಬಹುದು. ಆ ಸಮ್ಮಂಧವನ್ನು ಮಾತ್ರ ನೆನೆಯಬೇಡ.

ಶ್ರೀಮತಿ—ನಾನು ಯಾವ ಸಮ್ಮಂಧವನ್ನೂ ನೆನೆಯುತ್ತ ಇಲ್ಲ. ಅಂಥ ಕನಸುಗಳಿದ್ದರೆ ನಿಮಗೆ, ಅದು ನನಗಲ್ಲ. ಲಕ್ಷ್ಮಣನನ್ನು ನೋಡಿದರೆ ನಿಮಗೆಲ್ಲ ಹೊಟ್ಟೆಯುರಿ ಎಂಬುದು ಈಗ ತಿಳಿಯಿತು. ಅವನು ಇನ್ನು ನಮ್ಮ ಮನೆಗೆ ಬಾರದೆ ಇದ್ದರೆ ಸರಿ ಅಷ್ಟೆ? ನಿಮಗೆ ಸಂತೋಷವಾದೀತು. ಅದಕ್ಕೆ ಮುಚ್ಚುಮರೆ ಬೇಡ. ಅವನಿಗೆ ಇದ್ದಕ್ಕಿದ್ದಂತೇ ಹೇಳಿಬಿಡುವ ನೀನು ಹಾವು, ನಾವು ಹಾಲುಕೊಡುವವರು ಎಂದು ಹೇಳಿಬಿಡುವ. ಹೇಗೂ ಅವನ ಆಳು—ನಾವು ದೊಡ್ಡವರು! ಎಂಥ ಮಾತನಾಡಿದರೂ ಚೆನ್ನಾಗಿರುತ್ತೆ. ( ಸಿಟ್ಟು ದುಃಖಗಳಿಂದ ಹೊರಟು ಹೋಗುತ್ತಾಳೆ. )

( ಲಕ್ಷ್ಮಣನು ಅವಸರದಿಂದ ಒಳಕ್ಕೆ ಬರುತ್ತಾನೆ. )

ಲಕ್ಷ್ಮಣ—ಅಮ್ಮಾ, ಅವರೆಲ್ಲ ಹೊರಟಾಯಿತು. ಈಗ ಬಂದಾರು. ಡಾಕ್ಟರು ಸ್ವಲ್ಪ ಆಮೇಲೆ ಬರುತ್ತಾರಂತೆ.

ವಸಂತಿ—ಅದೇ ಅನುಕೂಲ. ರಾಯರು ಕೋರ್ಟಿಗೆ ಹೋಗಿದ್ದಾರಲ್ಲಾ, ಬೇಗ ಕೋರ್ಟಿಗೆ ಮುಖ ತೋರಿಸಿ ಬರುತ್ತೇನೆ ಅಂದರು. ಅವರು ಬಂದ ಮೇಲೆ ಇವರು ಬಂದರೆ ಸರಿ ಆಗುತ್ತದೆ. ಲಕ್ಷ್ಮಣ, ನೀನು ಕೋರ್ಟಿಗೆ ಹೋಗಿ ಅವರು ಬೇಗ ಬಂದಾರು ಎಂದು ತಿಳಿಸಿಬಿಡು. ಮಧ್ಯಾಹ್ನದ ಮೇಲೆ ನಿನ್ನ ಹತ್ತಿರ ಸ್ವಲ್ಪ ಮಾತನಾಡಲು ಸಿಕ್ಕಿ ಬಿಡು.

ಲಕ್ಷ್ಮಣ—ಆಗಲಿ ಅಮ್ಮ, ಹೋಗಿ ಬರುತ್ತೇನೆ. ಹಾಗೆಯೇ ಹೇಳಿ ಹೋದರೆ ಸಾಲದೆ, ಮನೆಗೆ ಒಂದು ಸಾರಿ ಹೋಗಿ ಬರುವಾ ಎಂದಿದೆ.

ವಸಂತಿ—ಹೇಳಿ ಬರಬೇಕೆಂದಿಲ್ಲ. ಇಲ್ಲಿಯೇ ಇದ್ದರೆ ನಿಮ್ಮ ಮನೆಯವರಿಗೂ ಸಿಟ್ಟು ಬಂದೀತು. ಹಾಗೆ ಇಲ್ಲಿ ಏನೂ ವಿಶೇಷ ಕೆಲಸ ಇರಲಾರದು.

( ಲಕ್ಷ್ಮಣ ಹೊರಟು ಹೋಗುತ್ತಾನೆ. )

ಳೇ, ಹಾಗೆ ಅನ್ನಬಾರದಿತ್ತು. ಬೆಳಿಗ್ಗಿನಿಂದ ಇಲ್ಲೆಲ್ಲ ಓಡಾಡಿಕೊಂಡಿದ್ದು, ಊಟದ ವೇಳೆಗೆ ಹೋಗು ಎಂದರೆ ಸಮನಲ್ಲ. ಬೆಳಿಗ್ಗಿನ ಕಾಫಿಯೂ ಆಗಿಲ್ಲ ಎಂದಳು ಶ್ರೀಮತಿ. ಅಲ್ಲದೆ ಅವರು ಬರುವಾಗ ಏನಾದರೂ ಕೆಲಸಕ್ಕೆ ಆದೀತು.... ಲಕ್ಷ್ಮಣ.

ಸುಧಾ—(ಸುಧಾಕರ ಬರುವನು) ಏನಮ್ಮ, ಬಾಗಿಲಿನಲ್ಲೇ ನಿಂತು ಅಷ್ಟು ಗಟ್ಟಿಯಾಗಿ ಕರೆಯುತ್ತೀಯಾ ?

ವಸಂತಿ—ಅವನು ಹೋಗಿ ಆಯಿತು. ಊಟಕ್ಕೆ ನಿಲ್ಲೂ ಎನ್ನುವು ದಕ್ಕೆ ಮರೆತುಬಿಟ್ಟೆ.

ಸುಧಾ—ಅದಕ್ಕೆ ಹೇಳಬೇಕೇ ! ಬಂದೇ ಬರುತ್ತಾನೆ. ಪುರುಸೊತ್ತಿನಲ್ಲಿ ಸರ್ಕೀಟು ಮುಗಿಸಿ ಎಷ್ಟು ಹೊತ್ತಿಗಾದರೂ ಬಂದಾನು. ಹ್ಯಾಗೂ ಇದು ಒಂದು ಛತ್ರ.

ವಸಂತಿ—ಕೋರ್ಟಿಗೆ ಹೋಗಿ ಬಾ ಎಂದು ಕಳುಹಿಸಿದ್ದು, ಅಲ್ಲಿಂದಲೇ ಮನೆಗೆ ಹೋಗುತ್ತೇನೆ ಅಂದ.

ಸುಧಾ—ಹೋಗಲೆ ಇಲ್ಲ.

ವಸಂತಿ—ಹಾಗಲ್ಲ, ಬೆಳಗ್ಗಿನಿಂದಲೂ ಕಾಫಿ ಕುಡಿದಿರಲಿಲ್ಲ. ನಮ್ಮ ಬಿಟ್ಟಿಯಲ್ಲೆ ಓಡಾಡುತ್ತಿದ್ದ ಇಷ್ಟು ಹೊತ್ತು. ಮನೆಯಲ್ಲಿ ವಿಶೇಷ ಮಾಡಿರುವಾಗ ಊಟಕ್ಕೆ ನಿಲ್ಲು ಎಂದು ಹೇಳಬೇಡವೆ?

ಸುಧಾ-ವಿಶೇಷವೋ, ಮತ್ತೊಂದೊ, ಅಮ್ಮ—ನಿನಗೆ ಬುದ್ಧಿ ಇಲ್ಲ. ಬಂದವರ ಮುಂದೆಯೂ ಅವನ ಹಾರಾಟ ತೋರಿಸಬೇಕೆಂದಿದೆಯೇ, ಅವನ ರೀತಿಯನ್ನು ಕಂಡು ಅವರಿಗೂ ಅನುಮಾನ ಬರಲಿಕ್ಕೆ ? ನೀನು ಒಳಗೆ ಹೋಗು, ಅವರು ಬಂದಾಯಿತು.

ವಸಂತಿ—ನೀನು ಇರುತ್ತೀಯಲ್ಲ ಶ್ರೀಮತಿಯನ್ನು ಕರೆದುಕೊ, ಅವರು ಬಂದವರನ್ನು ಇಲ್ಲಿ ಕುಳ್ಳಿರಿಸುತ್ತೀಯೋ ಅಥವಾ ಒಳಗೆ ಚಾಪೆ ಹಾಕಲೇ?

ಶ್ರೀಮತಿ—ಏನಮ್ಮ ?

ವಸಂತಿ—ಅವರು ಬಂದರೆಂದು ಕಾಣುತ್ತದೆ, ನಾನು ಒಳಗಿನ

ತಯಾರಿ ಮಾಡುತ್ತೇನೆ. ನೀನು ಅವರನ್ನೆಲ್ಲ ಕೂತುಕೊಳಿಸಿ ಮಾತ ನಾಡು.

ಸುಧಾ— ಈಗ ಬರುವವರು ಹೆಂಗಸರು ಮಾತ್ರ. ನಾನು ಯಾಕೆ ಇಲ್ಲಿ ? ಶ್ರೀಮತಿ ಮಾತ್ರ ಇದ್ದರೆ ಸಾಕು. ಚಾಪೆ ಗೀಪೆ ಹಾಸುವುದು ಬೇಡ, ಇಲ್ಲಿ ಸೋಫಾ ಕುರ್ಚಿ ಎಲ್ಲ ಇರುತ್ತ ತಮ್ಮನ್ನು ಚಾಪೆಯು ಕುಳ್ಳಿರಿಸಿದರು ಎಂದು ತಿಳಿಯುವುದಕ್ಕೆ.

ಶ್ರೀಮತಿ—ನೀನು ನಿಂತಿರಪ್ಪಾ, ನಿನ್ನಿಂದ ಒಬ್ಬಳಿಂದಾಗದು.

( ಸುಧಾ ಮಗ್ಗಲ ಕೋಣೆಗೆ ಹೋಗುವನು.)

ಅಮ್ಮಾ, ಲಕ್ಷ್ಮಣ ? ಚಾ ಮಾಡಿ ಇರಿಸಿ ತಣಿದುಹೋಯಿತು. ಬರಲಿಲ್ಲವೇ ಅವನು ? ಅಥವಾ ಬಂದ ಮೇಲೆ ತಿರುಗಿ ಇನ್ನೊಮ್ಮೆ ಕಳುಹಿಸಿದಿಯಾ ?

ವಸಂತಿ— ನಿನಗೆ ಅವನದ್ದೇ ಧ್ಯಾನವೆಂದು ಕಾಣುತ್ತದೆ.

ಶ್ರೀಮತಿ—ಹೌದು ನನಗೆ ಅವನದ್ದೇ ಧ್ಯಾನ. ಕೆಲಸ ಮಾಡಿಸು ವಾಗ ಮಾತ್ರ ನಿಮಗೆ ಅವನ ನೆನಪಾದರೆ ಸಾಕು. ಉಣ್ಣುವಾಗ, ತಿನ್ನು ವಾಗ, ಅವನ ನೆನಪು ಬೇಕಿಲ್ಲ. (ಒಳಗೆ ಹೋಗುವರು.)

( ಅಷ್ಟರಲ್ಲಿ ಸುಲೋಚನಾಬಾಯಿ, ಸೇವಂತಿ ಬರುವರು. )

ವಸಂತಿ— ಬನ್ನಿ ಸುಲೋಚನಾಬಾಯಿ, ಬಾ ಸೇವಂತಿ; ಇಲ್ಲೇ ಕೂತಿ ರುವ. ಆಗಲಿಕ್ಕಿಲ್ಲವೆ ? ಈಗಲೇ ಕಾಲು ತೊಳೆಯುತ್ತೀರಾ, ಸ್ವಲ್ಪ ಹೊತ್ತಾದ ಮೇಲೆಯೇ ?

ಸುಲೋಚನಾ— ಕಾಲು ತೊಳೆಯುವದಕ್ಕೇನು ಕಷ್ಟ? ನಾಲ್ಕು ಹೆಜ್ಜೆ ನಡೆದುದಷ್ಟೆ. ತೊಳೆದರಾಯಿತು ಪುರುಸೊತ್ತಿನಲ್ಲಿ, ವಸಂತಿಬಾಯಿ ನಿಮ್ಮ ಸುಧಾ ಪಾಸಂತಲ್ಲಾ ? ನಮ್ಮವರು ಹೇಳಿದರು. ಒಳ್ಳೆಯು ದಾಯಿತು. ಈ ವರ್ಷವೇ ಕಷ್ಟದ ಪರೀಕ್ಷೆಯಂತಲ್ಲಾ ? ಮುಂದಿನ ವರ್ಷ ಹೇಗೂ ಪಾಸಾದನು. ಎಲ್ಲಿ ನಿಮ್ಮ ಸುಧಾ, ಶ್ರೀಮತಿ, ಯಾರೂ ಕಾಣೆ ?

ವಸಂತಿ—ಶ್ರೀಮತಿ, ಎಲ್ಲಿದ್ದಿಯೇ ? ಕರೆಯುವುದು ಕೇಳುವು ದಿಲ್ಲವೇ ?

( ಮುಖ ಸಪ್ಪಗೆ ಮಾಡಿ ಬರುವಳು.)

ಶ್ರೀಮತಿ— ಬಂದಿರಾ ? ಬನ್ನಿ ಕುಳಿತುಕೊಳ್ಳಿ. ಸೇವಂತಿ, ಈ ಸೀರೆ

ಯಾವಾಗ ಕೊಂಡಿದ್ದೇ ? ಬಹಳ ಚೆನ್ನಾಗಿ ಒಪ್ಪುತ್ತದೆ ನಿನಗೆ !

ಸುಲೋಚನಾ— ಅದೇ ನಮ್ಮ ರಾಜಾರಾಮು ಮುಂಬಯಿಂದ ಬರುವಾಗ ತಂದಿದ್ದು. ಎಂಥದೋ ಹೆಸರು ಹೇಳಿದ. ಮುಂಬಯಿಯು ಲೇಟೆಸ್ಟ ಫೇಶನಂತೆ. ನೋಡಿದರೆ ಟಿಶ್ಯೂ ಹಾಗಿದೆ. ಹಾಗೆಂದು ಟಿಶ್ಯು ಅಲ್ಲ; ಮೇಲೆ ಜರಿ ಕೆಲಸ ಎಷ್ಟು ಚೆನ್ನಾಗಿದೆ ನೋಡು !

ವಸಂತಿ—ಏನಂತೆ ಬೆಲೆ?

ಸುಲೋಚನಾ—ಬೆಲೆ ಮಾತ್ರ ಹೆಚ್ಚಾಯಿತೋ ಏನೊ. ಹೋದದ್ದು ರಾಜಾರಾಮುನಲ್ಲವೇ ! ಅದರ ಬೆಲೆ ಅವನಿಗೇನು ಗೊತ್ತು ? ನೂರು ಐವತ್ತು ರೂಪಾಯಿ ಅಂದರಂತೆ. ಕೊಟ್ಟು ಬಂದ. ಆದರೆ ಮಂಗಳೂರಿನಲ್ಲಿಯೂ ಇಂಥ ಸೀರೆ ಸಿಗುವುದಿಲ್ಲ.

ವಸಂತಿ—ಅಯ್ಯೊ ! ನೂರೈವತ್ತು ರೂಪಾಯಿ ಕೊಡಲೇಬೇಕು, ಅಲ್ಲದೆ ಇದರ ಬಣ್ಣವೂ ಸೇವಂತಿಗೆ ಚೆನ್ನಾಗಿ ಒಪ್ಪುತ್ತೆ. ಥೇಟು ಗೊಂಡೆ ಹೂವಿನ ಬಣ್ಣ ಅಲ್ಲವೇ ? ನಮ್ಮ ಶ್ರೀಮತಿಗೆ ಒಂದು ತೆಗೆದರೆ ಆಗಬಹುದಿತ್ತು. ಅವರಿಗೆ ಹೇಳಬೇಕು. ಅವರಿಗೆ ಹೇಳಿದರೂ ಒಂದೆ, ಹೇಳದಿದ್ದರೂ ಒಂದೆ. ಇಲ್ಲಿಯೆ ಊರಲ್ಲಿ ಸುತ್ತಿ ಹೇಳಿದ್ದಕ್ಕೆ ಏನಾದರೊಂದು ಹಿಡಿದು ಕೊಂಡು ಬರುತ್ತಾರೆ.

ಸುಲೋಚನಾ—ಅದಕ್ಕೇನು ಕಷ್ಟ ? ನಮ್ಮ ರಾಜಾರಾಮುನಿಗೆ ಹೇಳಿದರೆ ಮುಂಬಯಿಂದ ತೆಗೆದು ಕಳುಹಿಸುತ್ತಾನೆ.

ಶ್ರೀಮತಿ—ನನಗೆ ಬೇಡಮ್ಮ, ಸೇವಂತಿಗೆಯ ಮೈಗೆ ಇದು ಒಪ್ಪುತ್ತದೆ ಎಂದು ಹೇಳಿದರೆ, ನನಗೆ ಬೇಕೆಂದ ಹಾಗಾಯಿತೇ ? ನನಗೆ ಟಿಶ್ಯೂ ಬೇಡ, ವ್ವಾಯಲೂ ಬೇಡ; ಕೋಟನ್ ಸಾಕು.

ಸೇವಂತಿ—ಹೂಂ, ಹೌದು ಶ್ರೀಮತಿ. ಸಿಲ್ಕು, ಟಿಶ್ಯು, ಎಲ್ಲಾ ಹಾಕಿದರೆ ಮೈ ಚರ್ಮ ಸುಟ್ಟು ಹೋಗಿಬಿಡುತ್ತದೆ. ಓ ನಿನ್ನ ಒಯ್ಯಾರವೆ!

ಶ್ರೀಮತಿ—ನಾನು ಚೇಷ್ಟೆಗೆ ಹೇಳಿದ್ದಲ್ಲ, ನಿಜಕ್ಕೂ ಹೇಳಿದೆ. ನಾನು ಈ ಊರು ಬಿಟ್ಟು ಎಲ್ಲಿಗೆ ಹೋಗುತ್ತೇನೆಯೇ ? ಈ ಊರಿಗೆ ಈ ಸೀರೆ ಸಾಕು. ಹಾಗೆ ಹಬ್ಬ ಹುಣ್ಣಿಮೆಗೆ ನನ್ನ ಹತ್ತಿರ ಒಂದೆರಡು ಒಳ್ಳೆಯ ಸೀರೆ ಇದೆ. ನೀನಾದರೆ......

ಸೇವಂತಿ—ನಾನಾದರೆ ಏನು ಮಹಾರಾಣಿಯೇ?

ಶ್ರೀಮತಿ—ಅಲ್ಲ. ನಾಳಿನ ಮದುಮಗಳು, ಅಲ್ಲದೆ ಇನ್ನು ನಾಲ್ಕು ದಿನ ಹೋದರೆ ಇಂಟರ್ ಆಗುತ್ತ...ಕಾಲೇಜಿಗೆ ಹೋಗುವವಳು.

ಸೇವಂತಿ—ಓಹೋ, ನಾನು ಮಾತ್ರ ಮದುವೆಯಾಗುವವಳೋ? ನೀನು ಸನ್ಯಾಸಿಯಾಗಿಯೇ ಉಳಿಯೋದು. ನಾನು ಇಂಟರಾದರೆ ನೀನು ಯುಸ್. ಯುಸ್. ಯುಲ್. ಸಿ.

ವಸಂತಿ—ನೋಡಿದಿರಾ ಸುಲೋಚನಾಬಾಯಿ ಮಕ್ಕಳ ಜಗಳ? ಅಂಥ ಒಳ್ಳೇ ಸೀರೆ ತಂದರೆ ನೀನು ಉಡದೆ ಹೋದರೆ ನಾನಾದರೂ ಉಟ್ಟೇನು. ಮಕ್ಕಳೆಂದರೆ ಹಾಗೆ ಮಾತಿನದ್ದೇ ಆಡಂಬರ. ನಮ್ಮ ಶ್ರೀಮತಿಗೂ ಸೀರೆ ಅಂದರೆ ಪ್ರಾಣ. ಆದರೆ ನಮ್ಮ ಯಜಮಾನರಿಗೆ ಸೀರೆ ಅಂದರೆ ಸೀರೆ ತರುತ್ತಾರೆ. ಅದು ಚಂದವಾಗಿದೆಯೋ, ಇಲ್ಲವೋ, ಅದೇನೂ ಗೊತ್ತಿಲ್ಲ. ಯಾಕೆ ಸುಮ್ಮನೆ ಕುಳಿತಿರೋದು, ಕಾಲು ತೊಳೆದು ಊಟಕ್ಕೆ ಹೋಗುವ. ಊಟಕ್ಕೂ ಆಗಿದೆ.

ಸುಲೋಚನಾ—ಸ್ವಲ್ಪ ಕುಳಿತಿರುವ; ಗಂಡಸರು ಬರಲಿ.

ವಸಂತಿ—ಗಂಡಸರಿಗೆ ಕಾಯುವುದು ಬೇಡ. ಇವರು ಕೋರ್ಟಿನಿಂದ ಬರಬೇಕು. ಅವರೂ ಹಾಗೆ ಹೇಳಿದ್ದಾರೆ.

ಸುಲೋಚನಾ—ಹಾಗೆ ನಮ್ಮವರೂ ಒಂದು ಕೇಸಿಗೆ ಹೊರಟಿದ್ದರು. ಬರುವಾಗ ತಡವಾಗಲಿಕ್ಕೂ ಸಾಕು ಎಂದಿದ್ದಾರೆ. ಎಲ್ಲಿ ನಿಮ್ಮ ಸುಧಾ? ಕಾಣಸಲೇ ಇಲ್ಲವಲ್ಲಾ?

ವಸಂತಿ—ಸುಧಾ, ಸುಧಾ.

ಸುಧಾ—( ಬರುತ್ತ ) ಬಂದೆನಮ್ಮಾ.

ಸುಲೋಚನಾ—ಏನು ಸುಧಾ, ಒಳಗೇನೇ ಅಡಗಿಬಿಟ್ಟೆ! ಮದುವೆಗೆ ಮುಂಚಿತವಾಗಿ ಹುಡುಗಿಯನ್ನು ನೋಡಬಾರದೆಂದೋ?

ಸುಧಾ—ಯಾರಿಗೆ ಈಗ ಮದುವೆಗೆ ತಯಾರಿ ನಡೆಸಿದ್ದೂ?

ಸುಲೋಚನಾ—ಇಲ್ಲಿದ್ದವರಿಗೆ? ಲಗ್ನ ಆಗದಿದ್ದವರಿಗೆ ಆಗಬೇಡವೇ?

ಯಾವಾಗ ಕೊಂಡಿದ್ದೇ? ಬಹಳ ಚೆನ್ನಾಗಿ ಒಪ್ಪುತ್ತದೆ ನಿನಗೆ!

ಸುಲೋಚನಾ— ಅದೇ ನಮ್ಮ ರಾಜಾರಾಮು ಮುಂಬಯಿಂದ ಬರುವಾಗ ತಂದಿದ್ದು. ಎಂಥದೋ ಹೆಸರು ಹೇಳಿದ. ಮುಂಬಯಿಯ ಲೇಟೆಸ್ಟ ಫೇಶನಂತೆ. ನೋಡಿದರೆ ಟಿಶ್ಯೂ ಹಾಗಿದೆ. ಹಾಗೆಂದು ಟಿಶ್ಯು ಅಲ್ಲ; ಮೇಲೆ ಜರಿ ಕೆಲಸ ಎಷ್ಟು ಚೆನ್ನಾಗಿದೆ ನೋಡು!

ವಸಂತಿ—ಏನಂತೆ ಬೆಲೆ?

ಸುಲೋಚನಾ—ಬೆಲೆ ಮಾತ್ರ ಹೆಚ್ಚಾಯಿತೋ ಏನೋ. ಹೋದದ್ದು ರಾಜಾರಾಮುನಲ್ಲವೇ? ಅದರ ಬೆಲೆ ಅವನಿಗೇನು ಗೊತ್ತು? ನೂರು ಐವತ್ತು ರೂಪಾಯಿ ಅಂದರಂತೆ. ಕೊಟ್ಟು ಬಂದ. ಆದರೆ ಮಂಗಳೂರಿನಲ್ಲಿಯೂ ಇಂಥ ಸೀರೆ ಸಿಗುವುದಿಲ್ಲ.

ವಸಂತಿ—ಅಯ್ಯೋ! ನೂರೈವತ್ತು ರೂಪಾಯಿ ಕೊಡಲೇಬೇಕು, ಅಲ್ಲದೆ ಇದರ ಬಣ್ಣವೂ ಸೇವಂತಿಗೆ ಚೆನ್ನಾಗಿ ಒಪ್ಪುತ್ತೆ. ಥೇಟು ಗೊಂಡೆ ಹೂವಿನ ಬಣ್ಣ ಅಲ್ಲವೇ? ನಮ್ಮ ಶ್ರೀಮತಿಗೆ ಒಂದು ತೆಗೆದರೆ ಆಗಬಹುದಿತ್ತು. ಅವರಿಗೆ ಹೇಳಬೇಕು. ಅವರಿಗೆ ಹೇಳಿದರೂ ಒಂದೆ, ಹೇಳದಿದ್ದರೂ ಒಂದೆ. ಇಲ್ಲಿಯೆ ಊರಲ್ಲಿ ಸುತ್ತಿ ಹೇಳಿದ್ದಕ್ಕೆ ಏನಾದರೊಂದು ಹಿಡಿದು ಕೊಂಡು ಬರುತ್ತಾರೆ.

ಸುಲೋಚನಾ— ಅದಕ್ಕೇನು ಕಷ್ಟ? ನಮ್ಮ ರಾಜಾರಾಮುನಿಗೆ ಹೇಳಿದರೆ ಮುಂಬಯಿಂದ ತೆಗೆದು ಕಳುಹಿಸುತ್ತಾನೆ.

ಶ್ರೀಮತಿ—ನನಗೆ ಬೇಡಮ್ಮ, ಸೇವಂತಿಗೆಯ ಮೈಗೆ ಇದು ಒಪ್ಪುತ್ತದೆ ಎಂದು ಹೇಳಿದರೆ, ನನಗೆ ಬೇಕೆಂದ ಹಾಗಾಯಿತೇ? ನನಗೆ ಟಿಶ್ಯೂ ಬೇಡ, ವ್ಯಾಲೂ ಬೇಡ; ಕೋಟನ್ ಸಾಕು.

ಸೇವಂತಿ—ಹೂಂ, ಹೌದು ಶ್ರೀಮತಿ. ಸಿಲ್ಕು, ಟಿಶ್ಯು, ಎಲ್ಲಾ ಹಾಕಿದರೆ ಮೈ ಚರ್ಮ ಸುಟ್ಟು ಹೋಗಿಬಿಡುತ್ತದೆ. ಓ ನಿನ್ನ ಒಯ್ಯಾರವೆ!

ಶ್ರೀಮತಿ—ನಾನು ಚೇಷ್ಟೆಗೆ ಹೇಳಿದ್ದಲ್ಲ, ನಿಜಕ್ಕೂ ಹೇಳಿದೆ. ನಾನು ಈ ಊರು ಬಿಟ್ಟು ಎಲ್ಲಿಗೆ ಹೋಗುತ್ತೇನೆಯೇ? ಈ ಊರಿಗೆ ಈ ಸೀರೆ ಸಾಕು. ಹಾಗೆ ಹಬ್ಬ ಹುಣ್ಣಿವೆಗೆ ನನ್ನ ಹತ್ತಿರ ಒಂದೆರಡು ಒಳ್ಳೆಯ ಸೀರೆ ಇದೆ. ನೀನಾದರೆ......

ಸೇವಂತಿ—ನಾನಾದರೆ ಏನು ಮಹಾರಾಣಿಯೋ ?

ಶ್ರೀಮತಿ—ಅಲ್ಲ. ನಾಳಿನ ಮದುಮಗಳು, ಅಲ್ಲದೆ ಇನ್ನು ನಾಲ್ಕು ದಿನ ಹೋದರೆ ಇಂಟರ್ ಆಗುತ್ತ... ಕಾಲೇಜಿಗೆ ಹೋಗುವವಳು.

ಸೇವಂತಿ—ಓಹೋ, ನಾನು ಮಾತ್ರ ಮದುವೆಯಾಗುವವಳೋ ? ನೀನು ಸನ್ಯಾಸಿಯಾಗಿಯೋ ಉಳಿಯೋದು. ನಾನು ಇಂಟರಾದರೆ ನೀನು ಯುಸ್. ಯುಸ್. ಯುಲ್. ಸಿ.

ವಸಂತಿ—ನೋಡಿದಿರಾ ಸುಲೋಚನಾಬಾಯಿ ಮಕ್ಕಳ ಜಗಳ ? ಅಂಥ ಒಳ್ಳೇ ಸೀರೆ ತಂದರೆ ನೀನು ಉಡದೆ ಹೋದರೆ ನಾನಾದರೂ ಉಟ್ಟೇನು. ಮಕ್ಕಳೆಂದರೆ ಹಾಗೆ ಮಾತಿನದ್ದೇ ಆಡಂಬರ. ನಮ್ಮ ಶ್ರೀಮತಿಗೂ ಸೀರೆ ಅಂದರೆ ಪ್ರಾಣ. ಆದರೆ ನಮ್ಮ ಯಜಮಾನರಿಗೆ ಸೀರೆ ಅಂದರೆ ಸೀರೆ ತರುತ್ತಾರೆ. ಅದು ಚಂದವಾಗಿದೆಯೋ, ಇಲ್ಲವೋ, ಅದೇನೂ ಗೊತ್ತಿಲ್ಲ. ಯಾಕೆ ಸುಮ್ಮನೆ ಕುಳಿತಿರೋದು, ಕಾಲು ತೊಳೆದು ಊಟಕ್ಕೆ ಹೋಗುವ. ಊಟಕ್ಕೂ ಆಗಿದೆ.

ಸುಲೋಚನಾ—ಸ್ವಲ್ಪ ಕುಳಿತಿರುವ; ಗಂಡಸರು ಬರಲಿ.

ವಸಂತಿ—ಗಂಡಸರಿಗೆ ಕಾಯುವುದು ಬೇಡ. ಇವರು ಕೋರ್ಟಿನಿಂದ ಬರಬೇಕು. ಅವರೂ ಹಾಗೆ ಹೇಳಿದ್ದಾರೆ.

ಸುಲೋಚನಾ—ಹಾಗೆ ನಮ್ಮವರೂ ಒಂದು ಕೇಸಿಗೆ ಹೊರಟಿದ್ದರು. ಬರುವಾಗ ತಡವಾಗಲಿಕ್ಕೂ ಸಾಕು ಎಂದಿದ್ದಾರೆ. ಎಲ್ಲಿ ನಿಮ್ಮ ಸುಧಾ ? ಕಾಣಿಸಲೇ ಇಲ್ಲವಲ್ಲಾ ?

ವಸಂತಿ—ಸುಧಾ, ಸುಧಾ.

ಸುಧಾ—( ಬರುತ್ತ ) ಬಂದೆನಮ್ಮಾ.

ಸುಲೋಚನಾ—ಏನು ಸುಧಾ, ಒಳಗೇನೇ ಅಡಗಿಬಿಟ್ಟೆ! ಮದುವೆಗೆ ಮುಂಚಿತವಾಗಿ ಹುಡುಗಿಯನ್ನು ನೋಡಬಾರದೆಂದೋ ?

ಸುಧಾ—ಯಾರಿಗೆ ಈಗ ಮದುವೆಗೆ ತಯಾರಿ ನಡೆಸಿದ್ದೂ ?

ಸುಲೋಚನಾ—ಇಲ್ಲಿದ ವರಿಗೆ ? ಲಗ್ನ ಆಗದಿದ ವರಿಗೆ ಆಗಬೇಡವೇ ?

ಸುಧಾ, ಕಾಲೇಜಿಗೆ ಹೋದ ಮೇಲೆ ತುಂಬ ಬುದ್ಧಿವಂತನಾಗಿದ್ದಿಯಾ-
ನಮ್ಮಂತಹ ಬಡವರು ಹೇಗೆ ಕಾಣಿಸಿಯಾರು ನಿನಗೆ ?

( ಸೇವಂತಿಯು ತಾಯಿಯು ಹಿಂದಕ್ಕೆ ನಿಂತು
ಶ್ರೀಮತಿಯೊಡನೆ ಮಾತನಾಡುತ್ತಿರುವಳು. )

ಸುಧಾ— ಕಾಲೇಜಿಗೆ ಹೋಗುವುದೇ ಬುದ್ಧಿವಂತರಾಗಬೇಕೆಂದಲ್ಲವೇ ? ಯಾರು ಬಡವರೆಂದು ಹೇಳಿದ್ದು ನೀವು ? ನೀವೇ ? ಆ ಬಡತನ ಬ್ಯಾಂಕಿನವರನ್ನು ಕೇಳಿದರೆ ಗೊತ್ತಾಗಿಬಿಡುತ್ತದೆ.

ಸೇವಂತಿ—ಬಾ ಶ್ರೀಮತಿ. ನಿನ್ನ ಸ್ಟಡೀ ರೂಮ್ ಯಾವುದು ನೋಡುವ ?

ವಸಂತಿ—ರಜೆಯ ಸಮಯದಲ್ಲಿ ಸ್ಟಡಿ—ಗಿಡಿ ಯಾಕೆ ?

ಸೇವಂತಿ—ರಜೆ ಬಂದು ಬಿಟ್ಟರೆ ಎಲ್ಲಾ ಮುಗಿಯಿತೇ ?

ಸುಲೋಚನಾ—ಮದುವೆಯಾಗುವ ತನಕ ಕಲಿಯುವುದಪ್ಪ. ಆ ಮೇಲೆ ಏನು ಮಣ್ಣಿನ ಓದು ?

ಸೇವಂತಿ—ನನಗೆ ಬಿ. ಯಸ್. ಸಿ. ಮಾಡಬೇಕು.

ಸುಲೋಚನಾ—ನಿನ್ನ ಗಂಡ ಬಿಟ್ಟರೆ ಐ. ಸಿ. ಯಸ್. ಸಹ ಓದು. ನೋಡಿ ವಸಂತಿಬಾಯಿ, ನನ್ನನ್ನು ಕೇಳಿದರೆ S.S.L.C. ಯಾದ ಮೇಲೆ ಹುಡುಗಿಯರಿಗೆ ಓದಿಸುವುದು ಸುಮ್ಮನೆ. ಆಗಲೇ ಒಂದು ಲಗ್ನ ಮಾಡಿಸಿದರೆ ತಂದೆ ತಾಯಿಗಳು ಬಚಾವು. ಇವರು ಬಿ. ಎಯೋ, ಬಿ. ಯಸ್ ಸಿಯೋ ಓದಿದರೆ ಆಮೇಲೆ ಐ. ಸಿ. ಯಸ್. ಹುಡುಗರನ್ನೇ ಹುಡುಕಬೇಕು. ಕಡಿಮೆ ಓದಿದವರು ಇವರಿಗೆ ಆಗುವುದಿಲ್ಲ, ಹೆಚ್ಚು ಓದಿದವರು ನಮಗೆ ಸಿಗುವುದಿಲ್ಲ. ನೀವ್ಯ ಶ್ರೀಮತಿ S.S.L.C. ಸಾಕೆನ್ನುತ್ತೀರಲ್ಲಾ ? ಅದೇ ಸಮನಾದ ಮಾತು.

ವಸಂತಿ—ನಮ್ಮವರು ಹೇಳುವುದೂ ಹಾಗೇ.

ಸುಧಾ-ಹಾಗಾದರೆ ಬಹಳ ಒಂದು ದೊಡ್ಡ ಪ್ರಶ್ನೆಯೇ ತೀರ್ಮಾನವಾದ ಹಾಗಾಯಿತು. ವಿಮೆನ್ಸ್ ಕೋನ್ಫರೆನ್ಸಿನ ಡಿಶೀಜನ್ ಇನ್ನು ಅಮ್ಮಾ, ಅಡಿಗೆಯಾಗಿದ್ದರೆ ಊಟ ಮಾಡುವ. ಒಳಗೆ ಕರೆದು

ಕೊಂಡು ಹೋಗು. ನಿಂತೇ ಮಾತನಾಡುತ್ತೀರಿ ಹೊರತು, ಇನ್ನೂ ಬಂದವರು ಕುಳಿತಿಲ್ಲ.

ಸುಲೋಚನಾ—ಏನು ಕೂತಿರುವುದು ? ನಮ್ಮ ಮನೆಯೇ ಅಲ್ಲವೆ, ಹೆಂಗಸರ ಸ್ವಭಾವ ಗೊತ್ತಿಲ್ಲವೇ ? ನಿಂತಲ್ಲಿಯೇ ಸಭೆ, ಕುಳಿತಲ್ಲಿಯೇ ಕಾನ್ಫರೆನ್ಸ್.

ಸುಧಾ— ಅದು ಸರಿಯೆ. ಆದರೆ ನೀವೆಲ್ಲಾ ಒಳಗೆ ಹೋಗಿ ಕುಳಿತರೆ. ಹೀಗೆ ನಿಂತರೆ ಕೆಲವರಿಗೆ ಮಾತನಾಡುವುದಕ್ಕೆ ದಾಕ್ಷಿಣ್ಯ.

ಸುಲೋಚನಾ—ಅಂದರೆ ಕೆಲವರಿಗೆ ಇಲ್ಲಿದ್ದರೆ ಬಾಯಿ ತೆರೆಯಲು ದಾಕ್ಷಿಣ್ಯ ಎಂದು ಹೇಳುತ್ತೀಯಾ ? ಯಾರಿಗದು ? ಶ್ರೀಮತಿಗೆ ?

ಸುಧಾ —ಯಾರಿಗಾದರೂ ಸರಿಯೆ.

ಶ್ರೀಮತಿ—ನನಗಲ್ಲ ಅವನೆನ್ನುವುದು. ಸೇವಂತಿ ಸುಮ್ಮನಿದ್ದಾಳೆಂದು ಹೇಳಿರಬೇಕು.

ಸುಲೋಚನಾ—ನಾಳೆ ಬೇಕಷ್ಟು ಮಾತನಾಡಲಿ ಎಂದಲ್ಲವೆ ನಮ್ಮ ಯೋಚನೆ ?

ಸುಧಾ— ನಿಮ್ಮ ಮಹಿಳಾ ಸಭೆಯವರಿಗೆ ಮದುವೆಯನ್ನು ಬಿಟ್ಟು ಮಾತಿಗೆ ಬೇರೆ ಅರ್ಥವೇ ಹೊಳೆಯುವುದಿಲ್ಲ. ಬನ್ನಿ, ಹೋಗುವ. ನಿಮಗೆ ಹಸಿವಾಗಿರದಿದ್ದರೆ ನನಗೆ ಹಸಿವಾಗಿದೆ. ಊಟ ಮಾಡುವ.

ವಸಂತಿ—ಯಾರು ನಿನ್ನನ್ನು ತಡೆದರು ? ಬನ್ನಿ ಸುಲೋಚನಬಾಯಿ ಹೋಗುವ.

( ಎಲ್ಲರೂ ಹೊರಡುವರು. ಸುಧಾ ಕೊನೆಗೆ ಉಳಿಯುವನು. )

ಸುಲೋಚನಾ—ಅರೆ, ನೀನು ಯಾಕೆ ಕೊನೆಗೆ ನಿಂತೆ ?

ಸುಧಾ— ನಿಮ್ಮ ಮಹಿಳಾ ಸಭೆಗೆ ಸೇರಬೇಕೇ ಬೇಡವೇ ಎಂದು. ಅಷ್ಟರಲ್ಲಿ ಡಾಕ್ಟರು ಬಂದರೆ ? ಅಪ್ಪ ಬರುವುದು ಕಾಣುತ್ತಾ ಇದೆ.

( ಶಂಕರರಾಯರು ಬರುವರು. ಅವರ ಜತೆಗೆ ಲಕ್ಷ್ಮಣ ರಿಕಾರ್ಡ್ ಕಟ್ಟು ಹಿಡಿದುಕೊಂಡು ಬರುತ್ತಾನೆ. ಕಟ್ಟನ್ನು ಇಟ್ಟು ಹೊರಡುವಾಗ )

ಶಂಕರ—ಎಲ್ಲಿಗೆ ಹೊರಟೆ ?

ಲಕ್ಷ್ಮಣ—ಮನೆಗೆ. ಅಪ್ಪ ಬರಲಿಕ್ಕೆ ಹೇಳಿದ್ದಾನೆ.

ಶಂಕರ— ಊಟ ಮಾಡಿಕೊಂಡು ಹೋಗಬಹುದಲ್ಲಾ ? ಸುಧಾ, ರಾಮರಾಯರು ಬಂದರೇನೋ ?

ಸುಧಾ— ಇಲ್ಲ. ಈಗ ಬಂದಾರು. ಮನೆಯವರೆಲ್ಲ ಬಂದಿದ್ದಾರೆ.

ಶಂಕರ— ಹಾಗಾದರೆ ಲಕ್ಷ್ಮಣ ಥಟ್ಟನೆ ಅವರಲ್ಲಿಗೆ ಹೋಗಿ ಬರಲಿಕ್ಕೆ ಹೇಳು. ಊಟಕ್ಕೆ ಕಾದು ಕುಳಿತಿದ್ದಾರೆ ಅನ್ನು.

ಲಕ್ಷ್ಮಣ—ಆಗಲಿ. ( ತೆರಳುವನು. )

ಶಂಕರ— ಊಟಕ್ಕೆ ಬಂದು ಬಿಡು.

ಸುಧಾ— ಅಪ್ಪಾ ನಮ್ಮ ಊಟ ಅವರು ಬಂದ ಮೇಲೆ ಆಗಲಿ ಅಲ್ಲವೇ ?

ಶಂಕರ— ಮತ್ತೆ ? ಅವರನ್ನು ಬಿಟ್ಟು ಊಟ ಮಾಡುವುದೇ ? ನಿನಗೆ ನಾನು ಹೇಳಿದ್ದು ಮರೆತು ಹೋಗದೆ ? ನೋಡಿದೆಯಲ್ಲ ಅವರ ಹುಡುಗಿಯನ್ನು. ನೋಡದಿದ್ದರೆ ಚೆನ್ನಾಗಿ ನೋಡಿಕೊ. ಅವರು ಬರುವದು ಅದಕ್ಕೆ. ಅಲ್ಲದೆ ಮಗು ರಾಜಾರಾಮ ತುಂಬ ಯೋಗ್ಯ ಹುಡುಗ. ಇನ್ನು ಇಂಜನಿಯರಿಂಗಿಗೆ ಹೋಗುತ್ತಾನಂತೆ. ನಿಮ್ಮಿಬ್ಬರ ಭಾರ ಒಂದು ಸಾರಿ ತಪ್ಪಿದರೆ.... ?

ಸುಧಾ— ಶ್ರೀಮತಿಯ ಲಗ್ನ ಮೊದಲಾಗಲಿ.

ಶಂಕರ— ನಿನಗೆ ನೀನು ಹೇಳಿದ್ದೇ ಮಾತು. ಅವರು ಹಾಗೆಲ್ಲ ಒಪ್ಪಲಾರರು. ಅವರಿಗೆ ಅವರ ಮಗಳ ಲಗ್ನ ಮುಖ್ಯ.

ಸುಧಾ— ನಿನಗೂ ಹಾಗೆ ಅಲ್ಲವೆ ?

ಶಂಕರ— ಒಟ್ಟಾರೆ ಏನಾದರೂ ಮಾತನಾಡುತ್ತಿರಬೇಡ. ಡಾಕ್ಟರು ತಾವಾಗಿ ಮಾತನಾಡದಿದ್ದರೂ ಸುಲೋಚನಾಬಾಯಿ ಕೇಳಿಯೇ ಕೇಳುತ್ತಾರೆ. ಅಲ್ಲಾ ಅನ್ನಬೇಡ.

ಸುಧಾ— ಅಪ್ಪಾ, ನನ್ನಿಂದ ನಿನಗೆ ತೊಂದರೆ ಆಗದು. ಆದರೆ ನೀನು ಸಾಟಿ ಲಗ್ನದ ಭ್ರಮೆ ಇಟ್ಟು ಕೆಲಸ ಮಾಡಬೇಡ.

ಶಂಕರ— ನೀನೊಬ್ಬ ಒಳಗೆ ಹೋಗಿ ಮಣೆ ಗಿಣೆ ಇರಿಸಿದ್ದಾರೋ ನೋಡಿ ಬಾ. ಊಟ ಆದ ಮೇಲೆ ಯಾವ ದೂಎಿನಲ್ಲಿ ಕುಳಿತಿರಲಿ ? ಇಲ್ಲೇ ಆಗಬಹುದಲ್ಲ ?

ಸುಧಾ—ಇಲ್ಲಿ ಬೇಡ. ಇಲ್ಲಿ ನಿನ್ನ ರಿಕಾರ್ಡುಗ, ಲಾ:ಬುಕ್ಕು, ಲಂಬರು ಎಲ್ಲಾ ಇದೆ. ಬೇಡ.

ಶಂಕರ—ಹಾಗಾದರೆ ಇಲ್ಲಿನ ಸೋಫಾ, ಕುರ್ಚಿ, ಎಲ್ಲಾ ಒಳಗೆ ಹಾಕುವ. ಯಾರಿದ್ದಾರೆ ಹಿಡಿಯುವುದಕ್ಕೆ ? ಲಕ್ಷ್ಮಣ ಇದ್ದರೆ ಚೆನ್ನಾಗಿರುತ್ತಿತ್ತು. ಹೂಂ, ನಾನು ನೀನು ಹಿಡಿಯುವ.

( ಒಂದೆರಡು ಕುರ್ಚಿ ಇರಿಸುವಾಗ ಶ್ರೀಮತಿ ಬರುತ್ತಾಳೆ. )

ಏನೇ ಇದು. ಅವರೆಲ್ಲ ಬಂದಿರುವಾಗ ನೀನು ಇಲ್ಲಿ ನಿಂತಿದ್ದೀಯ ?

ಶ್ರೀಮತಿ—ಏನಿಲ್ಲ. ನಿನ್ನ ಹತ್ತಿರ ಏನೋ ಹೇಳಬೇಕೆಂದು ನಿಂತಿದ್ದೆ.

ಶಂಕರ—ಏನು ಹೇಳದು. ಒಳಗೆ ಏನಾದರೂ ಬೇಕಿತ್ತೇ ?

ಸುಧಾ—ಅಪ್ಪಾ ಡಾಕ್ಟರು ಬಂದರು.

ಶಂಕರ—ಬಂದರೆ ? ಹೋಗಿ ಕರೆದುಕೊಂಡು ಬಾ.

( ಸುಧಾ ಹೋಗುವನು. )

ಏನು ಶ್ರೀ ?

ಶ್ರೀಮತಿ—ಅಪ್ಪಾ !

ಶಂಕರ—ಏನು ಹೇಳು ?

ಶ್ರೀಮತಿ—ನೀನು ಸಿಟ್ಟಾಗುತ್ತೀಯಾ ಏನು, ಹೇಳಿದರೆ ? ನನಗೆ ಈಗ ಅವರು ಬಂದದ್ದು ಏಕೆ ಎಂದು ಗೊತ್ತಾಯಿತು.

ಶಂಕರ—ಗೊತ್ತಾಗದೆ ಇರುತ್ತದೆಯೇ ?

ಶ್ರೀಮತಿ—ಆದರೆ ನನ್ನ ಪ್ರಸ್ತಾಪ ತೆಗೆಯಬೇಡ. ಅದನ್ನೆ ಹೇಳುವುದಕ್ಕೆ ನಿಂತೆ. ಆಮೇಲೆ ನೀನು ಏನೇನು ತಿಳಿಯಬಾರದು. ನನಗೆ ಸದ್ಯ ಮದುವೆ ಬೇಡ.

( ರಾಮರಾಯರು ಬರುತ್ತಾರೆ. ಜತೆಗೆ ಸುಧಾಕರ. ಶ್ರೀಮತಿ ಒಳಗೆ ಹೋಗುತ್ತಾಳೆ. )

ರಾಮರಾವ್—ಏನು ಶಂಕರರಾವ್ ? ಕೋರ್ಟು ಮುಗಿಸಿ ಬಂದು ಬಿಟ್ಟಿರಾ ? ನನಗೂ ಒಂದು ಕೇಸ್ 'ಎಟೆಂಡ್' ಮಾಡಲಿಕ್ಕಿತ್ತು. ಅದಕ್ಕೇ ಇಷ್ಟು ತಡವಾಯಿತು ನೋಡಿ.

ಶಂಕರರಾವ್— ( ಮೊದಲಿನ ಯೋಚನೆಯಲ್ಲಿಯೆ ) ಇದೇನು ಇವಳು ಅನ್ನುವುದು ? ಇವಳ್ಕೆಲ್ಲ ಏನಾಗಿದೆ? ( ರಾಮರಾಯರನ್ನು ಕಂಡು. ) ಬಂದಿರಾ ಡಾಕ್ಟರೇ! ಬನ್ನಿ, ಬನ್ನಿ. ಕೇಸ್ ಎಟೆಂಡ್ ಮಾಡಲಿಕ್ಕೆ ಹೋಗಿದ್ದಿದ್ದೀರಿ ಅಂದಿರಾ ? ನಾನೂ ಈಗಷ್ಟೆ ಬಂದದ್ದು. ನಮ್ಮ ನಿಮ್ಮ ಉದ್ಯೋಗ ಎಂದರೆ ಕತ್ತೆಯ ಚಾಕರಿ. ಮಾಡಿದಷ್ಟೂ ಮುಗಿಯುವುದಿಲ್ಲ. ಸಾಕು ಬೇಸರಾಗಿ ಹೋಗುತ್ತದೆ.

ರಾಮ—ನಿಮ್ಮದೇನು ಮಹಾ ? ಹಗಲು ದುಡಿದರೂ ರಾತ್ರಿ ಸುಖವಾಗಿ ನಿದ್ರೆ ಮಾಡಬಹುದು. ನಮ್ಮ ಕೆಲಸಕ್ಕೆ ರಾತ್ರಿ ಅಂತ ಇಲ್ಲ; ಹಗಲು ಅಂತ ಇಲ್ಲ. ನಿನ್ನೆ ರಾತ್ರಿ ಮಲಗುವಾಗ ಎರಡು ಘಂಟೆ ಆಗಿತ್ತು. ಒಂದು ಕಾಲರಾ case. ನಿಮಗೇನು ? ಹಗಲಿನಲ್ಲಿ ಒಂದಿಷ್ಟು ಕೋರ್ಟಿನಲ್ಲಿ ನಿಂತು ಒದರಾಡಿದರೆ ಸಾಕು.

ಶಂಕರ—ಅವರವರದ್ದು ಅವರವರಿಗೆ ಹೆಚ್ಚು. ನಮ್ಮಲ್ಲಿಯೂ ಇದ್ದಾರೆ, ಮಧ್ಯ ರಾತ್ರಿಗೆ ಬಂದು ಮಾತನಾಡಿಸುವ ಕಕ್ಷಿಗಾರರು. ಬರುವ ವರ್ಷದ ಕೇಸಿಗ ಈ ವರ್ಷವೇ ಜೀವ ತಿನ್ನುವ ಕ್ಲೈಂಟ್ಸ ಇದ್ದಾರೆ. ಅಂಗಿ ತೆಗೆಯಿರಿ. ಹೆಂಗಸರ ಊಟ ತೀರಿರಬೇಕು. ಈಗಾಗಲೇ ಗಂಟೆ ಒಂದಾಯಿತು. ( ಅವರು ಅಂಗಿ ಕಳಚುವರು. )

ಶಂಕರ—ಲಕ್ಷ್ಮಣ, ನೀರು ಇರಿಸಿದಿಯೋ ನೋಡು? ಲಕ್ಷ್ಮಣ ಎಲ್ಲಿ ಬರಲೇ ಇಲ್ಲವೇ ? ಸುಧಾ, ನೀನು ಹೋಗು.

( ಸುಧಾಕರ ಒಳಗೆ ತೆರಳುವನು. )

ರಾಮ—Very good, ಏನು ಶಂಕರರಾವ ಇಲ್ಲಿಗೆ ಬರುತ್ತದೆ ಪರಿಮಳ ! ಏನೇನು ಮಾಡಿದ್ದೀರಿ ? ನಾನೂ ಊಟಕ್ಕೆ ಆಳಲ್ಲ, ಮಾತಿಗೆ ಮಾತ್ರ.

ಶಂಕರ—ಛೀ, ಏನೂ ಮಾಡಿರಲಿಕ್ಕಿಲ್ಲ. ಮಾಡಿದ್ದರೂ ಅದೆಲ್ಲ ಹೆಂಗಸರ ರಾಜ್ಯದ ವಹಿವಾಟು. ಏನು ಮಾಡುತ್ತಾರೆಯೋ, ಬಿಡುತ್ತಾರೆಯೋ, ಅವರಿಗೇ ಗೊತ್ತು ?

ರಾಮ—ನಿಮ್ಮ ಮಗನಿಗೆ ನನ್ನ Congratulations ಹೇಳಿ. ಪಾಸಾಗಿ ಬಿಟ್ಟನಲ್ಲಾ ? ಏನು ಕೇಳಿದಿರಾ ಅವನ್ನ ?

ಶಂಕರ—ನಮ್ಮ ಹುಡುಗನ್ನ ಅದಕ್ಕೆಲ್ಲ ಕೇಳಬೇಕಾಗಿಲ್ಲ. ಅದೂ ನಿಮ್ಮ ಮಗಳ ವಿಚಾರದಲ್ಲಿ ಕೇಳಬೇಕಾಗುತ್ತದೆಯೇ? ಸೇವಂತಿ up-to-date girl. ಆ ವಿಷಯದಲ್ಲಿ ಚರ್ಚೆ ಇಲ್ಲ. ರಾಜಾರಾಮ ಮನೆ ಯಲ್ಲಿಲ್ಲವಂತಲ್ಲಾ? ಬಂದಿದ್ದರೆ ಚೆನ್ನಾಗಿತ್ತು.

ರಾಮರಾಯ—ಏಕೊ ಮಂಗಳೂರಿಗೆ ಹೋಗಿದ್ದಾನೆ. ಬರುತ್ತಾ ನಲ್ಲಾ? ಆ ಪ್ರಸ್ತಾಪ ನಿಧಾನವಾಗಿ ಆಗಲಿ. ನಿಮ್ಮ ಹುಡುಗಿಗೆ ಇನ್ನೂ ಹದಿ ನಾರೊ, ಹದಿನೇಳೋ. ಅವಸರವೂ ಇಲ್ಲ.

ಶಂಕರ—ಇರಲಿ. ತಾಯಿ ತಂದೆಯರಿಗೆ ಮಗಳಿಗೆ ಹದಿನಾರು ಆಯಿ ತೆಂದರೆ, ಹದಿನಾರೂ ಒಂದೇ, ಹದಿನೇಳೂ ಒಂದೇ, ಇಪ್ಪತ್ತೈದೂ ಒಂದೇ. ಮದುವೆ ಆಗುವ ತನಕ ಆತುರ ತಪ್ಪದಲ್ಲ.

ಸುಧಾ—ಇನ್ನೂ ಹಾಗೇ ನಿಂತಿದ್ದೀರಲ್ಲಾ! ಬನ್ನಿ ಹೋಗುವ. (ಒಳಗೆ ನಿಂತಿರುವ ಶ್ರೀಮತಿಯನ್ನು ಕಂಡು) ನೀನೇನು ಇಲ್ಲಿ ಕುಳಿ ತ್ತಿದ್ದೀಯಾ? (ರಾಮರಾಯರೂ, ಶಂಕರರಾಯರೂ ಒಳಗೆ ಹೋಗುವರು.) ಅವ ರೆಲ್ಲ ಊಟಕ್ಕೆ ಕುಳಿತಿರುವಾಗ ನೀನು ಒಬ್ಬಳೇ ಹೊರಗಿದ್ದರೆ ಹೇಗೆ?

ಶ್ರೀಮತಿ—ನೀನು ಹೋಗು ಬೇಕಾದರೆ.

ಸುಧಾ—ನಾನು ಹೋಗುತ್ತೇನೆ. ನೀನು ಲಕ್ಷ್ಮಣನಿಗಾಗಿ ಕಾದಿ ದ್ದೀಯಾ ಎಂದು ಕಾಣುತ್ತದೆ. ಅವನು ಇವತ್ತು ಊಟಕ್ಕೆ ಬರುವುದಿಲ್ಲ. ನೀನು ಹೀಗೆಲ್ಲ ಮಾಡಿ ಎಲ್ಲರನ್ನೂ ತೊಡಕಿಗೆ ಸಿಕ್ಕಿಸಬೇಡ. ಅಮ್ಮ ನಾಲ್ಕು ಸಾರಿ ಆಯಿತು ನಿನ್ನನ್ನು ಕರೆದೂ ಕೂಗಿ.

ಶ್ರೀಮತಿ—ನೀನು ಹೋಗು. ನಾನು ಊಟ ಮಾಡುವುದಿಲ್ಲ.

ಸುಧಾ—ನೀನು ಊಟ ಮಾಡದಿದ್ದರೆ ಚಿಂತಿಲ್ಲ. ಆದರೆ ಅಪ್ಪ ಅಮ್ಮನ ಮರ್ಯಾದೆ ಮಾತ್ರ ಕಳೆಯಬೇಡ.

ಶ್ರೀಮತಿ—ನಿನಗೆ ಸೇವಂತಿಯನ್ನು ಲಗ್ನವಾಗುವ ಆಸೆ ಇದ್ದರೆ ಆಗು. ನಮಗೆಲ್ಲ ಸಂತೋಷವೇ. ಆದರೆ ನನ್ನ ವಿಚಾರದಲ್ಲಿ ಮಾತ್ರ ನೀನು ಕೈ ಹಾಕಬೇಡ. (ಸಿಟ್ಟಾಗಿ ಹೋಗುತ್ತಾಳೆ.)

ಸುಧಾ—ಈಕೆ ತನ್ನ ಹಟ ಗಟ್ಟಿ ಮಾಡಿದರೆ ಅವರು ಏನು ತಿಳಿದು ಬಿಡುತ್ತಾರೊ! ಇವಳು ಇಷ್ಟು ಒರಟಳು ಎಂದು ನಾನು ತಿಳಿದಿರಲಿಲ್ಲ. ಇವಳಿಂದಾಗಿ ನನ್ನ ಆಸೆಗೂ ಕಲ್ಲು ಬೀಳುತ್ತದೆಯೋ ಏನೋ.

ಶಂಕರ— (ಒಳಗಿನಿಂದ) ಸುಧಾ, ಶ್ರೀಮತಿ! ನೀವು ಮನೆಯವರಿಗೂ ಕೂಗಿ ಕರೆದು ಉಪಚಾರ ಮಾಡಬೇಕೆ?

ರಾಮು—( ಒಳಗಿನಿಂದ.) ಅದು ಸ್ವಾಭಾವಿಕ. ಇಬ್ಬರಿಗೂ ನಾಚಿಕೆ ಆಗುತ್ತಿರಬೇಕು.

ಸುಧಾ—ಬಂದೆ ಅಪ್ಪಾ. ಬಾಗಿಲು ಹಾಕುತ್ತಿದ್ದೇನಷ್ಟೆ. ( ಎಂದ ಗಡಿಬಿಡಿಯಿಂದ ಒಳಕ್ಕೆ ಹೋಗುವನು. )

---

# ಎರಡನೆಯ ಅಂಕ

ಸಮಯ:— ಒಂದು ವರ್ಷದ ನಂತರ.

ಸ್ಥಳ:— ಶಂಕರರಾಯರ ಮನೆಯ ಬೈಠಾಕು ಖಾನೆ.

ಅವರ ಎರಡನೆಯ ಮಗ ಸದಾಶಿವನು ಮನೆಗೆ ಬಂದಿರುತ್ತಾನೆ.

ಸದಾಶಿವ—ಅಪ್ಪಾ, ಶ್ರೀಮತಿಯನ್ನು ಸುಮ್ಮನೆ ಮನೆಯಲ್ಲಿರಿಸಿಕೊಂಡು ಏನು ಮಾಡಬೇಕೆಂದಿದ್ದೀಯಾ ? ಒಂದು ವರ್ಷ ಸಮಯ ಹೇಗೂ ಹಾಳಾಯಿತು. S. S. L. C. ಯಲ್ಲಿ ಅಷ್ಟು ಚೆನ್ನಾಗಿ ಮಾರ್ಕು ಗಳಿಸಿ ಕೆಲಸವಿಲ್ಲದೆ ಸುಮ್ಮನೆ ಮನೆಯಲ್ಲಿ ಕುಳಿತಿರುವುದೆಂದರೆ...... ಅವಳಿಗೂ ಬೇಸರವೆ. ಈ ವರ್ಷ ಜೂನಿಗಾದರೂ ಅವಳನ್ನು ಮಂಗಳೂರಿಗೆ ಕಳುಹಿಸು. ಅವಳು ಕನಿಷ್ಟ ಬಿ. ಎ. ಯನ್ನಾದರೂ ಮಾಡಲಿ. ಏನೂ ಆಗದ ಕಾಲದಲ್ಲಿ ಯಲ್. ಟಿ. ಕಲಿತು ಉಪಾಧ್ಯಾಯಿನಿಯಾದಾಳು. ಈಗಿನ ಕಾಲದಲ್ಲಿ ಹುಡುಗಿಯರಾದರೆ ಏನು ? ಜೀವನಕ್ಕೆ ತೀರ ಇನ್ನೊಬ್ಬರ ಮುಖ ನೋಡುತ್ತಿರುವುದು ಚಂದವಲ್ಲ.

ಶಂಕರ—ಸದಾ, ನೀನು ವಿದ್ಯೆ ವಿದ್ಯೆ ಅನ್ನುತ್ತೀಯಾ. ವಿದ್ಯೆ ಬರಿದಾಗುತ್ತದೆಯೇ ಹೇಳು ? ಇಂಟರಿಗೆ ಎಷ್ಟು ಹಣ ಬೇಡ ? ಅವಳು ನನ್ನ ಮಾತನ್ನು ಕೇಳಿದ್ದರೆ, ಕಳೆದ ವರ್ಷವೇ ಡಾಕ್ಟರರ ಹುಡುಗನೊಂದಿಗೆ ಲಗ್ನವಾಗಿಹೋಗುತ್ತಿತ್ತು. ಇವಳಿಗೆ ಅಷ್ಟು ಮನಸಿದ್ದರೆ ಅವರು ಬಿ. ಎ. ತನಕವೂ ಕಲಿಸುತ್ತಿದ್ದರು. ಇವಳಿಗೋಸ್ಕರವಾಗಿ ಸುಧಾಕರನ ಲಗ್ನಕ್ಕೆ ಅವಸರ ಮಾಡಿದ್ದು. ಇವಳು ಮುಖ ಗಂಟು ಹಾಕಿ ಕುಳಿತುಬಿಟ್ಟಳು. ಇಷ್ಟು ಚಿಕ್ಕ ಹುಡುಗಿ ಒರಟಾಗಿ ಹಟ ಹಿಡಿದರೆ ಏನು ಮಾಡಬೇಕು ? ಇಬ್ಬರದ್ದೂ ಲಗ್ನ ಆಗಿಹೋಗಿದ್ದರೆ ನನ್ನ ಚಿಂತೆ ಎಷ್ಟೋ ಕಡಿಮೆ ಆಗಿಹೋಗುತ್ತಿತ್ತು. ಒಂದೇ ಸಾಲದಲ್ಲಿ ಇಬ್ಬರ ಖರ್ಚೂ ಮುಗಿಯುತ್ತಿತ್ತು. ನೋಡು, ಅದರಿಂದಲ್ಲವೇ ಈ ವರ್ಷ ಸುಧಾಕರನ ಭಾರ ತಪ್ಪಿದ್ದು ? ಎಲ್ಲರಿಗೂ ವಿದ್ಯಾಭ್ಯಾಸಕ್ಕೆ ನಾನು ಎಲ್ಲಿಂದ ಹಣ ತರಲಿ ? ನಿನಗೆ ಬಿ. ಯಸ್. ಸಿ. ಸಾಕೆಂದು ತೋರುವುದಿಲ್ಲ. ಚಿದಾನಂದ ಬಿ.ಎ ಆಗಬೇಕಂತೆ. ನನಗೆ ಎಷ್ಟು ಸಂಪಾದನೆ ಇದೆ? ಹೇಗೆ...

ಪೂರೈಸುದು, ಎಂಬುದನ್ನು ಯೋಚಿಸಬೇಡವೆ? ಕಳೆದ ವರ್ಷದ ತನಕ ಹೇಗೊ ಹೇಗೊ ಜೀವನ ಸಾಗಿತ್ತು. ಈ ಒಂದು ಒರ್ಷದಲ್ಲಿಯಂತೂ ಸ್ಥಿತಿ ತಲೆಕೆಳಗಾಗಿದೆ. ಪ್ರತಿಯೊಂದು ಸಾಮಾನಿಗೂ ಒಂದಕ್ಕೆ ನಾಲ್ಕು ಬೆಲೆ. ಸುಧಾನ ಮದುವೆಗೆ ಮಾಡಿದ ಎರಡು ಸಾವಿರ ರೂಪಾಯಿ ಸಾಲ ಹಾಗೆಯೇ ಇದೆ. ಈ ವರ್ಷ ನೀವೆಲ್ಲರೂ ವಿದ್ಯೆ ವಿದ್ಯೆ ಎಂದು ಕೇಳಿದರೆ ನಾನು ಕುತ್ತಿಗೆಯ ತನಕ ಸಾಲದಲ್ಲಿ ಮುಳುಗಬೇಕು.

ಸದಾ—ನೀನು ಹೇಳುವುದೂ ನಿಜವೆ. ಕಳೆದ ವರ್ಷ ಮದರಾಸಿನಲ್ಲಿ ತಿಂಗಳಿಗೆ ಐವತ್ತು ರೂಪಾಯಿ ಸಾಕಾಗತಿದ್ದರೆ ಈಗ ಎಪ್ಪತ್ತೈದು ಎಂಭತ್ತು ಬೇಕು. ಬನಾರಸ್ಸಿಗೆ ಹೋಗುವುದಾದರೆ ತಿಂಗಳಿಗೆ ನೂರೈವತ್ತು ಬೇಕು. ಆದರೆ ಇಷ್ಟರಲ್ಲಿಯೇ ವಿದ್ಯೆ ನಿಲ್ಲಿಸಿಬಿಟ್ಟರೆ ಏನು ಪ್ರಯೋಜನ ಇದೆ ಅನ್ನುತ್ತೀಯಾ? ತಿಂಗಳಿಗೆ ಐವತ್ತು ರೂಪಾಯಿಯ ಕೆಲಸ ಸಿಗುವುದು ಕಷ್ಟ.

ಶಂಕರ—ಅದಕ್ಕೇನೆ ನಾನು ಅನ್ನುವುದು. ಎಲ್ಲರೂ ನನ್ನೊಬ್ಬನ ಮೇಲೆಯೇ ಹೊರೆಯಾಗಬೇಡಿ ಎಂದು. ನಾನು ಹಣ ತರುವುದಾದರೂ ಎಲ್ಲಿಂದ? ಹಿರಿಯರು ಮಾಡಿಟ್ಟ ಭೂಮಿ ಇದೆಯೇ? ಈ ವಕಾಲತ ಏನನ್ನು ಕೊಟ್ಟೀತು? ಎಲ್ಲಾ ವ್ಯಾಪಾರಕ್ಕೂ ಬೆಲೆ ಏರಿದೆ. ಆದರೆ ನಮ್ಮ ಉದ್ಯೋಗ ಹಾಗೆಯೆ ಇದೆ. ಅಥವಾ ಅದಕ್ಕೂ ಕಡಿಮೆ. ಅದಕ್ಕೆನೇ ಅಂದೆ. ಡಾಕ್ಟರರು ಎರಡನೆಯ ಹುಡುಗಿಯ ವಿಚಾರ ಮಾತನಾಡಿದರು. ಅವರಿಗೆ ಈ ಸಾರಿ ಆದರೂ ನಾಟೆಲಗ್ನ ಆಗಬೇಕೆಂಬ ಹಟ ಇದೆ. ನಿನ್ನ ಅಣ್ಣನೂ ಹಾಗೆಯೇ ಅನ್ನುತ್ತಾನೆ.

ಸದಾ—ಅಣ್ಣನಿಗೇನಪ್ಪ! ಅವನ ರೀತಿ ಬೇರೆ. ಅವರೊಂದಿಗೆ ಸೇರಿ ಉದ್ಯೋಗ ನಡೆಯಿಸುತ್ತಿದ್ದಾನೆ. ಚೆನ್ನಾಗಿ ಸಂಪಾದನೆ ಆದೀತು. ರಾಮರಾಯರಿಗೇ ಬೇಕೆನ್ನುವಷ್ಟು ಪ್ರೆಕ್ಟಿಸ್ ಇದೆಯಲ್ಲಾ? ಬಿಡಾರವನ್ನೂ ಅಲ್ಲಿಗೇ ಸಾಗಿಸಿದ್ದಾನೆ. ಸ್ವಂತ ಖರ್ಚೂ ಇನ್ನಿಲ್ಲ. ನಾನು ನನ್ನ ವಿದ್ಯೆ ಮುಗಿದು ಸಮವಾದ ಒಂದು ಕೆಲಸ ಸಿಗುವ ತನಕ ಮದುವೆ ಯೋಚನೆಯನ್ನೇ ಬಿಟ್ಟಿದ್ದೇನೆ. ಆಮೇಲೆ ಲಗ್ನ.

ಶಂಕರ—ಅವರು ಸುಧಾನಿಗೆ ಕೊನೆಯ ವರ್ಷ ಸಹಾಯ ಮಾಡಲಿಲ್ಲವೆ? ಹಾಗೆ ನಿನಗೂ ಮಾಡಿಯಾರು.

ಸದಾ—ಹೌದು ಮಾಡುತ್ತಾರೆ. ಅಣ್ಣನಿಗೆ ಕೊನೆಯ ವರ್ಷಂತ ಮಾಡಿದರು. ಅದೇನು ಮಹಾ ತ್ಯಾಗವಲ್ಲ. ಇದು ನಾಲ್ಕು ವರ್ಷದ ಕೆಲಸ. ಇತ್ತ ನಾನು ಮದುವೆ ಮಾಡಿಕೊಂಡು ಹುಡುಗಿಯನ್ನು ತವರುಮನೆ ಯಲ್ಲಿ ಬಿಟ್ಟು ವಿದ್ಯೆಮುಗಿಸಿ ನೌಕರಿ ಸಿಗುವ ತನಕ ಅಂತರಿಕ್ಷದಲ್ಲಿ ಕುಳಿತಿರ ಬೇಕು. ಹುಡುಗಿಗೂ ಹಂಗಾಯಿತು. ನನಗೂ ಹಂಗಿನ ಜೀವನ ವಾಯಿತು.

ಶಂಕರ—ಅದರಲ್ಲಿ ಹಂಗೇನು? ಸಮ್ಮಿಲ್ಲಿರಬಾರದೇ?

ಸದಾ—ಏನನ್ನುತ್ತೀಯಾ ಅಪ್ಪಾ ನೀನು? ಇಷ್ಟೆಲ್ಲ ಆಗುವಾಗ ಐದು ವರ್ಷ ಬೇಕು. ಅಲ್ಲಿಯ ತನಕ ಹುಡುಗಿಯನ್ನು ಡಿಪೋಸಿಟ ಇಡುವುದೇ? ಲಗ್ನದ ವಿಚಾರ ಏನಿದ್ದರೂ ಆಮೇಲೆಯೇ.

ಶಂಕರ—ಅಲ್ಲಿಯ ತನಕ ಅವರು ಕಾಯುತ್ತಾರೆಯೇ?

ಸದಾ—ಅದರ ವಿಚಾರವೇ ಮಾಡಬೇಡ ಎಂದೆನಲ್ಲಾ? ನಿನಗೆ ಅಷ್ಟು ಅನಿಸಿದರೆ ಶ್ರೀಮಂತಿಯನ್ನು ರಾಜಾರಾಮನಿಗೆ ಕೊಡಬಹುದು. ಅಂದರೆ ರಾಜಾರಾಮನ ವಿಷಯ ನನಗೆ ಗೊತ್ತು. ಅವನು ಇಷ್ಟವಿಲ್ಲದೆ ಮದುವೆಯಾಗಲಾರ. ಆವನಿಗೆ ಇಂಗ್ಲೆಂಡಿಗೆ ಹೋಗುವ ಆಸೆಯಿದೆ. ವಾರ್ ಟ್ರೈನಿ ಆಗಿಯೋ, ಇನ್ನೇನಾದರೂ ಆಗಿಯೋ ಆತ ಹೋಗ ಬಹುದು. ರಾಜಾರಾಮನ ಸಲುವಾಗಿ ತುಂಬ ಕಾಲ ಕಾಯಬೇಕಾ ದೀತು. ಅಲ್ಲದೆ ಅವನಿಗೂ ಈ ಸಮ್ಮಂಧದಲ್ಲಿ ಹೆಚ್ಚಾಗಿ ಇಷ್ಟವಿಲ್ಲ. ಅದೆಲ್ಲ ಸಾಧ್ಯವಿದ್ದರೆ ಕಳೆದಾವರ್ಷಯೇ ಅವರು ಸಾಟಿ ಲಗ್ನಕ್ಕೆ ಒತ್ತಾಯ ಮಾಡುತ್ತಿದ್ದರು.

ಶಂಕರ—ನಾನು ಶ್ರೀಮತಿಗೆ ಸಾವಿರ ಸಾರಿ ಹೇಳಿದೆ.

ಸದಾ—ಯಾಕೆ ಒತ್ತಾಯ ಮಾಡಿದಿ? ಅವಳಿಗೇನು ಪ್ರಾಯವೆ? ಸಣ್ಣವಳು. ಸುಖವಾಗಿ ಇರಲಿ. ಲಗ್ನವಾಗಿಬಿಟ್ಟರೆ ಆಯಿತೆ! ಜವಾ ಬ್ದಾರಿ ಇಲ್ಲವೇ?

ಶಂಕರ—ನಾನು ಒತ್ತಾಯ ಪಡಿಸಿದೇನೇ? ಆಗಿದ್ದರೆ ಆಗುತ್ತಿ ತ್ತಲ್ಲಾ ಎಂದು ನನ್ನ ಆಸೆ. ನನ್ನ ಪಾಲಿನ ಹೊರೆಯಲ್ಲವೇ ಮಗು ಅದು?

ಅವಳ ಲಗ್ನಕ್ಕೆ ತಿರುಗಿ ಸಾಲ ಮಾಡಬೇಕಾಯಿತು. ಅದರಿಂದ ಅವರಿಗೂ ನಮ್ಮ ಮೇಲೆ ಬೇಸರವಾದ ಹಾಗೆ ಕಾಣುತ್ತದೆ.

ಸದಾ—ಬೇಸರಕ್ಕೆ ಬೇರೆ ಏನಾದರೂ ಕಾರಣ ಇರಬೇಕು. ಅಂತೂ ಏನೋ ಬೇಸರ ಇದೆ. ಅಣ್ಣನ ಮಾತಿನಲ್ಲಿಯೂ ಕಂಡುಬಂತು. ಸೇವಂತಿಯ ಮಾತಿನಲ್ಲಿಯೂ ಚೇಷ್ಟೆ ಕಂಡಿತು. ಅವರಿಬ್ಬರೂ ಅಲ್ಲಿಯೇ ಇದ್ದಾರಲ್ಲವೇ ?

ಶಂಕರ—ಅಲ್ಲಿಯೇ ಇರಲಿ ಅಲ್ಲಾ. ನನಗೆ ಮಗು, ಈ ಮನೆಯ ಖರ್ಚನ್ನು ನೋಡಿಕೊಂಡು ಹೋಗುವುದು ತುಂಬ ಕಷ್ಟವಾಗುತ್ತ ಬಂದಿದೆ. ತಾನು ಅಲ್ಲಿಯೇ ಇರುತ್ತೇನೆಂದು ಸುಧಾ ಹೇಳಿದ. ನಾನು ಮಾತನಾಡಲಿಲ್ಲ.

ಸದಾ—ಹಾಗಲ್ಲ, ಅಮ್ಮನೆಂದಳು : ಸೇವಂತಿಗೆ ನಮ್ಮ ಮನೆಯೇ ಸರಿ ಆಗುವುದಿಲ್ಲವಂತೆ. ಅದಕ್ಕಾಗಿ ಅವರು ಅಲ್ಲಿದ್ದಾರಂತೆ.

ಶಂಕರ—ಛೀ, ಅದೆಲ್ಲ ಹೆಂಗಸರ ಮಾತು. ತೆಗೆದುಕೊಂಡು ಏನು ಮಾಡುತ್ತೀಯಾ ? ಒಂದು ದಿವಸ ಕಾಫಿಗೆ ಹುಡಿ ಕಡಿಮೆ ಆಯಿತೆಂದು ಅವಳು ಕುಡಿಲಿಲ್ಲವಂತೆ, ಇವಳು......

ಸದಾ—ಯಾಕೆ ನಿಲ್ಲಿಸಿದಿ ?

ಶಂಕರ—ಬೇಡ, ಬೇಡ.

ವಸಂತಿ—( ಪ್ರವೇಶ ಮಾಡಿ ) ಹೇಳುವುದನ್ನು ಹೇಳಿ ಬಿಡಿ. ನನಗೂ ಕೇಳೀತು. ನಿಮಗೆ ನನ್ನಿಂದಲೇ ತಪ್ಪೆಂದು ಕಾಣುತ್ತಿದೆಯೋ ಏನೋ. ಒಂದು ಸಾರಿ ಕಾಫಿಗೆ ಹುಡಿ ಕಡಿಮೆ ಆದುದಲ್ಲ. ನೂರು ಸಾರಿ ಆಯಿತು. ನಾವು ಬಡಿಸಿದ್ದನ್ನು ಬಟ್ಟಲಿನಲ್ಲಿ ಬಿಟ್ಟದ್ದು ನೋಡಿ. ಹೀಗೆಂದು ಒಂದು ದಿನ ಅಡುಗೆ ಮನೆಗೆ ಬಂದು ಸಹಾಯ ಮಾಡಿದವಳಲ್ಲ. ಇಂಟರ್ ಓದಿದ್ದಾಳೆ. ನಮ್ಮಂತೆ ಯಾಕೆ ಕೆಲಸ ಮಾಡಿಯಾಳು ? ನೀವು ಏನೂ ಅನ್ನಿ. ಅವರು ಈ ಮನೆಗೆ ದೂರವಾದ ಹಾಗೇ. ನೀವು ಎಣಿಸಿರಬಹುದು: ನಿಮ್ಮ ಮಗ ಡಾಕ್ಟರಿಕೆ ಮಾಡಿಕೊಂಡು ನಿಮ್ಮ ಮುಪ್ಪಿನ ಕಾಲದಲ್ಲಿ ಏನಾದರೂ ಸಹಾಯ ಮಾಡಿಯಾನು ಎಂದು. ಆ ಭ್ರಮೆ ಇನ್ನು ಬೇಡ. ಅವನು ಸಹ ಮನೆಗೆ ಬಾರದೆ ಎಷ್ಟು ತಿಂಗಳಾಯಿತು ? ಕಳೆದ ವಾರ

ಸದಾ, ತುಂಬ ತಲೆ ನೋವಾಗಿತ್ತು. ಬಂದು ನೋಡಿ ಹೋಗು ಎಂದು ಹೇಳಿ ಕಳುಹಿಸಿದರೆ ಬಂದನೇ? ಒಂದಿಷ್ಟು ಮುದ್ದು ಕಳುಹಿಸಿಕೊಟ್ಟ. ನಾನು ಆ ಮುದ್ದನ್ನು ಮುಟ್ಟಲೂ ಇಲ್ಲ. ಸೇವಂತಿ ಒಟ್ಟಾರೆ ಈ ಮನೆಗೆ ಎರಡು ಮೂರು ಸಾರಿ ಬಂದಿರಬಹುದು. ನಮ್ಮ ಶ್ರೀಮತಿ ಅಲ್ಲಿಗೆ ಒಂದೆರಡು ಸಾರಿ ಹೋದರೆ ಏನೇನೋ ಹಂಗಿಸಿ ಕಳುಹಿದರಂತೆ.

ಅವನಂತೂ ನಮಗೆ ದೂರವೆ. ಸಮೀಪವಿದ್ದರು ದೂರವಾದ ಹಾಗೆ ಅದು. ಅವರಿಗೂ ಗೊತ್ತು—ಅವನು ಇಲ್ಲಿಯೇ ಇದ್ದರೆ ಸಂಪಾದನೆ ಚೆನ್ನಾಗಿ ಆಗುವ ಕಾಲದಲ್ಲಿ ಮನೆಯ ಖರ್ಚಿಗೂ ಸ್ವಲ್ಪ ಕೊಡಬೇಕಾದೀತ್ತು ಎಂದು. ಅಲ್ಲಿಯೇ ಇದ್ದರೆ ರಗಳೆ ಇಲ್ಲವಲ್ಲಾ? ಮಾತುಕತೆ ನಿಲ್ಲಿಸಿದರೆ ಮತ್ತಷ್ಟು ಒಳ್ಳೆಯದಾಯಿತು.

ಶಂಕರ—ಯಾಕೆ ಈ ಪುರಾಣವೆಲ್ಲ ಸದಾನ ಮುಂದೆ? ನಮಗೆ ಅವನೊಬ್ಬನ ಹೊರೆಯಾದರೂ ತಪ್ಪಿತಲ್ಲಾ? ಅಷ್ಟೇ ಸುಖ.

ವಸಂತಿ—ಅಲ್ಲಾ, ನೀವು ತಂದೆ ಮಕ್ಕಳು ಸೇರಿ ಹೆಣ್ಣು ಕೊಟ್ಟು ತರುವ ವಿಚಾರ ಮಾತನಾಡುತಿದ್ದೀರಿ. ಕೇಳಿದೆ. ಅವರು ಮರುಳರಲ್ಲ, ನಾವು ಹುಚ್ಚರಲ್ಲ. ಇನ್ನು ಅವರು ಈ ಮನೆಗೆ ಹೆಣ್ಣು ಕೊಡಲಿಕ್ಕಿಲ್ಲ. ಶ್ರೀಮತಿ ಅಲ್ಲಿಗೆ ಹೋಗಿದ್ದರೆ ಒಂದೇ ಒಂದು ದಿನ ಬೇಳೆ ಬೇಯುತ್ತಿರಲಿಲ್ಲ.

ಶಂಕರ—ವಸಂತಿ ಬಿಡು ಆ ಮಾತು. ಬೇಡವಾದರೆ ಬೇಡ. ನಮ್ಮ ಹುಡುಗಿ ಅವರ ಮಗನನ್ನು ನಂಬಿ ಕೂತಿಲ್ಲ. ಅವರ ಹುಡುಗ ಶ್ರೀಮತಿಯನ್ನು ನಂಬಿ ಹುಟ್ಟಿಲ್ಲ. ಆದರೆ ನೀನು ಕೇಳಿದ ಮಾತನ್ನು ಅಲ್ಲಿಂದಲ್ಲಿಗೆ ಕೇಳಿಬಿಡುವುದು ಒಳ್ಳೆಯದು. ಇದ್ದ ಜಗಳ ಬೆಳೆಯಿಸಬಾರದು. ಸುಧಾಕರ ಅಲ್ಲಿಗೆ ಹೋಗಿ ಬಿಡಾರ ಮಾಡಿದನೆಂದರೆ ಇಲ್ಲಿಗೆ ಬರಲಿಕ್ಕೇ ಇಲ್ಲವೆಂದು ಯಾಕೆ ತೀರ್ಮಾನ ಮಾಡಬೇಕು? ಇಂಥ ಮಾತನ್ನು ಕೇಳಿ ಬರುವುದಿದ್ದರೂ ಬಾರದ ಹಾಗೆ ಮಾಡಿದ ಹಾಗಾಗುತ್ತದೆ. ಯಾಕೆ ಸುಮ್ಮನೆ ನಿಷ್ಠುರ ಬೆಳೆಯಿಸಬೇಕು? ನೀನು ಸುಮ್ಮನೆ ಒಳಗೆ ಹೋಗು.

ವಸಂತಿ—ನಾನು ಒಳಗೆ ಹೋಗುತ್ತೇನೆ. ನೀವು ತಂದೆ ಮಕ್ಕಳು ಇಬ್ಬರೇ ಮಾತನಾಡಿಕೊಂಡಿರಿ. ( ತೆರಳುವಳು. )

ಸದಾ—ಇದೇನಪ್ಪಾ, ಲಗ್ನವಾಗಿ ಒಂದು ಒಂದೂವರೆ ವರ್ಷ

ವಾಯಿತು. ಇಷ್ಟೆಲ್ಲ ವಿಪರೀತಕ್ಕೆ ಬೆಳೆಯಬೇಕೇ ? ಈ ನಿಷ್ಠುರಕ್ಕೆ ಏನು ಕಾರಣವೊ ? ಅಣ್ಣನ ಹತ್ತಿರ ಹೋದಾಗಲೂ ಒಂದು ನಮೂನೆ ಯಿಂದ ಮಾತನಾಡಿದ. ನಾನು ವಿದ್ಯೆ ಮುಂದರಿಸುವ ವಿಚಾರ ಮಾತ ನಾಡಿದರೆ ಆತ ತನಗೆ ಬೇಡದ ವಿಚಾರವೆಂದು ತೋರಿಸಿಕೊಂಡ. ನಾನು ಸುಮ್ಮನಾದೆ.

ಶಂಕರ—ಹಾಗೆ ಮಗು, ಅಂಥ ಸಂಗತಿಗಳನ್ನು ಅಲ್ಲಿಂದಲ್ಲಿಗೆ ಬಿಡು ವುದೇ ಒಳ್ಳೆಯದು.

ಸದಾ—ಅದು ಇರಲಿ ಅಪ್ಪಾ. ಶ್ರೀಮತಿಯ ಮೇಲೆ ಅಣ್ಣನಿಗೆ ಯಾಕೆ ಅಷ್ಟು ಸಿಟ್ಟು ? ನನ್ನ ಹತ್ತಿರವೂ ಆತ ನೇರಾಗಿ ಮಾತನಾಡಿದ. ಸೇವಂತಿ ಅವಳ ವಿಷಯವಾಗಿ ಮಾತನಾಡುವಾಗ ಶ್ರೀಮತಿಗೆ ಇನ್ನೆಷ್ಟು ವರ್ಷ ಲಗ್ನವಿಲ್ಲಾ ಎಂದು ಕೇಳಿದಳು. ಮಡುಗಳಿಗೆಗೆ ಲಕ್ಷ್ಮಣ ಬಂದಿ ಲ್ಲವೇ ಊರಿಗೆ ? ಈಗ ನಿಮ್ಮ ಮನೆಗೆ ಬರುತ್ತಾನೆಯೋ ? ಎಂದು ಕೇಳಿ ದರು.

ಶಂಕರ—ಅದೇನೋ ನನಗೆ ತಿಳಿಯದು ಮಗು. ಒಂದು ವರ್ಷ ದಿಂದ ಲಕ್ಷ್ಮಣ ನಮ್ಮ ಮನೆಗೆ ಬಂದ ಹಾಗೆ ಕಾಣೆ. ಆಗಾಗ ಇಲ್ಲಿಗೆ ಬಂದು ನಮ್ಮ ಚಾಕರಿ ಮಾಡಿಕೊಂಡು ಇರುತ್ತಿದ್ದ. ಇವರು ಯಾರೊ ಅವನಿಗೆ ಏನಂದರೋ !

ಸದಾ— ಅಷ್ಟೆಯೊ. ಅವರು — ಶ್ರೀಮತಿಯನ್ನು ಲಕ್ಷ್ಮಣನಿಗೆ ಕೊಡುತ್ತಾರೆಯೋ— ಎಂದು ಚೇಷ್ಟೆ ಮಾಡಿದ ಹಾಗಿದೆಯಲ್ಲಾ ?

ಶಂಕರ— ಲಕ್ಷ್ಮಣನಿಗೆ ? ಆ ಯೋಚನೆಯನ್ನು ನಾನು ಕನಸಿ ನಲ್ಲಿಯೂ ಮಾಡಿರಲಾರೆ. ನಮ್ಮಲ್ಲಿ ಕೆಲಸ ಮಾಡಿಕೊಂಡಿದ್ದ ಹುಡುಗ. ಇಲ್ಲಿಯೇ ಊಟ ಮಾಡಿ ಶಾಲೆಗೆ ಹೋಗಿ ಈಗೇನೋ ಬಿ. ಯಸ್. ಸಿ. ಮಾಡಿ ನೌಕರಿ ದೊರಕಿಸಿಕೊಂಡಿದ್ದಾನೆ ನಿಜ. ಆದರೆ ಅವರ ಕುಲ ಏನು, ನಮ್ಮ ಕುಲ ಏನು ! ಅವನೂ ಅದನ್ನು ಎಣಿಸಿರಲಾರ. ನಾವೂ ಅದನ್ನು ಎಣಿಸಿರಲಾರೆವು. ಸಮ್ಮಂಧಕ್ಕೆ ಬರಿಯ ಜಾತಿ ಒಂದೇ ಇದ್ದರೆ ಸಾಕೇ ? ಸ್ಥಾನ, ಮಾನ, ಒಂದೂ ಬೇಡವೇ ?

ಸದಾ—ಒಂದು ವರ್ಷದ ಮೇಲೆಯೇ ಆಯಿತು, ಲಕ್ಷ್ಮಣ ಬರ ಲಿಲ್ಲಾ ಅನ್ನುತ್ತೀರಿ. ಈ ಊರಿಗೆ ಬಂದಿದ್ದಾನೆ. ನನಗೆ ಮೊನ್ನೆಯ ದಿನ

ಸಿಕ್ಕಿದ. ಮನೆಗೆ ಬಾ ಎಂದು ಎಷ್ಟು ಒತ್ತಾಯ ಮಾಡಿದರೂ ಬರಲಿಲ್ಲ. ಅವನ ವಿಷಯದಲ್ಲಿ ಈ ಮನೆಯಲ್ಲಿ ಏನೋ ದುಸುಮುಸಿ ಆಗಿರಬೇಕು.

ಶಂಕರ— ಊರಲ್ಲಿರಲಿಕ್ಕಿಲ್ಲಾ; ಬರಲಿಕ್ಕಿಲ್ಲಾ, ಎಂದು ತಿಳಿದಿದ್ದೆನು. ದುಸುಮುಸಿ ಏನು ?

ಸದಾ—ಅಮ್ಮನಿಗೇನಾದರೂ ತಿಳಿದಿದ್ದೀತೇ ?

ಶಂಕರ—ಅವಳಿಗೇನು ಗೊತ್ತಿದ್ದೀತು ! ನನ್ನಷ್ಟೆ.

ಸದಾ— ಅಮ್ಮಾ ?

ವಸಂತಿ— ( ಬಂದು ) ಕರೆದಿ ಏನು ಮಗು ?

ಸದಾ—ಶ್ರೀಮತಿ, ಚಿದಾನಂದ, ತಿರುಗಾಡಲು ಹೋದವರು ಬಂದಿರಲಿಲ್ಲವೇ ?

ವಸಂತಿ— ಇಲ್ಲ. ಈಗ ಬಂದಾರು.

ಸದಾ—ಒಳಗಿದ್ದಾರೆಯೇ ಎಂದು ವಿಚಾರಿಸಿದ್ದಷ್ಟೆ ಒಂದು ಮಾತು—ನಿನಗೆ ಏನಾದರೂ ಗೊತ್ತೇ, ಲಕ್ಷ್ಮಣ ನಮ್ಮ ಮನೆಗೆ ಯಾಕೆ ಬರುತ್ತಿಲ್ಲವೆಂದು ?

ವಸಂತಿ-ಯಾಕೆ ಅವನು ಬರಬೇಕು ? ಬಂದರೇನು ? ಬಿಟ್ಟರೇನು ? ಅವನಿಂದಲೇ ನಮ್ಮ ಶ್ರೀಮತಿಯ ಲಗ್ನ ತಪ್ಪಿದ್ದು. ಇವರಿಗೂ ನಾನು ಹೇಳಲಿಲ್ಲ.

ಶಂಕರ--ಏನದು ?

ವಸಂತಿ—ಆ ಸಂಗತಿ ನಿಮಗೆ ಹೇಳಲಿಲ್ಲಾ ಅಂದೆ. ಹಳೆಯ ಪುರಾಣ ಅದು. ಶ್ರೀಮತಿಗೆ ಅವನಲ್ಲಿ ಇಷ್ಟ ಬೆಳೆದಂತೆ ಕಂಡಿತು. ಅದಕ್ಕಲ್ಲವೇ ಅವಳು ಆ ದಿನ ಲಗ್ನಕ್ಕೆ ಒಪ್ಪದೇ ಹೋದದ್ದು. ಸುಧಾಕರ ಆಗ ಎಲ್ಲ ಸಂಗತಿ ಹೇಳಿದ್ದ. ಅವರ ವಿಷಯ ಊರಿನಲ್ಲಿ ಸುದ್ದಿ ಆಗಿದೆ. ಅವನನ್ನು ಹೊರಗೆ ಹಾಕಬೇಕು ಎಂದು ಒಂದು ದಿನ ನಾನು ಏನೊ ನೆಪ ಮಾಡಿ 'ನೀನು ಅಲ್ಲಿಯೇ ಇರು ಮಗು. ನೀನು ಇನ್ನೂ ಇಲ್ಲಿರುವುದು ನೋಡಿ ನಿನ್ನ ತಂದೆಗೆ ಸಿಟ್ಟು ಬಂದೀತು' ಎಂದು ಹೇಳಿದೆ.

ಶಂಕರ—ಇದು ಯಾವದೂ ನನಗೆ ಗೊತ್ತಿಲ್ಲವಲ್ಲಾ !

ವಸಂತಿ—ಹೇಳಿ ಏನಾಗಬೇಕು ಅಂಥ ವಿಷಯ ? ನಿಮ್ಮ ಮಗನ

ಸುದ್ದಿ ತೆಗೆದರೆ ನಿಮಗೆ ಹೆಚ್ಚಾಗುತ್ತದೆ. ಅದಕ್ಕಾಗಿ ಇವಳ ಸುದ್ದಿ ನಿಮ್ಮ ಕಿವಿ ಮೇಲೆ ಹಾಕಲಿಲ್ಲ.

ಸದಾ—ಅಮ್ಮಾ, ಅವನು ಎಂಥ ಒಳ್ಳೆಯ ಹುಡುಗನೆಂಬುದು ನಿಮಗೆ ಗೊತ್ತಿಲ್ಲ. ನಾನೇನು ಮನೆಯಲ್ಲಿ ಇದ್ದವನಲ್ಲವೇ ? ಶ್ರೀಮತಿಗೆ ಅವನನ್ನು ಕಂಡರೆ ಆದರವೆಂಬುದು ನಿಜ. ಆದರೆ ಅದನ್ನೆಲ್ಲ ವಿಪರೀತ ಅರ್ಥಕ್ಕೆ ಕೊಂಡು ಹೋಗುವ ಕಾರಣವೇನಿತ್ತು ? ಏನೂ ಇಲ್ಲದೆ ತನ್ನ ಮೇಲೆ ಆರೋಪ ಬಂದೀತಲ್ಲಾ ಎಂದು ತುಂಬ ನೊಂದುಕೊಂಡಿದ್ದಾನೆ.

ವಸಂತಿ—ನಿನಗೆ ತಿಳಿಯದು ಮಗು. ಆ ದಿನ ನಾನು ಶ್ರೀಮತಿಯನ್ನು ಲಗ್ನಕ್ಕೆ ಒಪ್ಪಿಸಲು ಕಾಲು ಮಾತ್ರ ಹಿಡಿಯಲಿಲ್ಲ. ಇವರೂ ಹೇಳಿ ನೋಡಿದರು. ಇವಳೂ ಅದನ್ನು ಒಪ್ಪದೇ ಬಿಡಲಿ, ಮನೆಗೆ ಬಂದವರೊಟ್ಟಿಗೆ ಊಟಕ್ಕೆ ಕುಳಿತುಕೊಳ್ಳಲು ಬಿಡಲಿಲ್ಲ. ಇದೆಲ್ಲ ಲಕ್ಷ್ಮಣನಿಂದ ಆದದ್ದೆಂಬುದು ಗೊತ್ತು.

ಶಂಕರ—ಓಹೋ, ಈಗ ಅವನ ವಿಷಯದಲ್ಲಿ ಇಷ್ಟೆಲ್ಲ ನಡೆದು ಹೋಗಿತ್ತೇ ?

ವಸಂತಿ—ಬೇಕಾದರೆ ನೀವು ಸುಧಾನನ್ನು ಕೇಳಿ.

ಶಂಕರ—ಸುಧಾನನ್ನು ಕೇಳಿ ಆಗಬೇಕಾದುದೇನು ?

ವಸಂತಿ—ಅವನು ನನಗಿಂತಲೂ ಹೆಚ್ಚಾಗಿ ಕಂಡು ಕೇಳಿದವ. ನನಗೂ ಅದು ನಿಜವೆಂದು ಕಂಡಿತು. ನಮ್ಮಲ್ಲಿ ಊಟಕ್ಕಿದ್ದು ಕೆಲಸ ಮಾಡಿಕೊಂಡು ಇದ್ದವ. ಓದಿ ಬಂದ ಎಂದ ಮಾತ್ರಕ್ಕೆ ಇಷ್ಟೆಲ್ಲ ಸ್ನೇಹಕ್ಕೆ ಅವಕಾಶ ಮಾಡಿಕೊಂಡರೆ ನಾಳೆ ಮರ್ಯಾದೆ ಹೋಗುವ ಪಾಡು ಬಂದೀತೆಂದು—ಲಕ್ಷ್ಮಣನಿಗೆ ಬರಬೇಡ ಅನ್ನಬೇಕಾಯಿತು.

ಸದಾ—ಅಮ್ಮಾ, ಒಮ್ಮೆ ಅದು ನಿಜವಾದರೂ ಲಕ್ಷ್ಮಣನಿಗೆ ಏನಾಗಿದೆ? ಓದಿದ್ದಾನೆ, ಗುಣದಲ್ಲಿ ಸಂಭಾವಿತ. ಅವಳಿಗೆ ಇಷ್ಟವಿದ್ದಲ್ಲಿ ಯಾಕೆ ಆಗಬಾರದು ? ಜಾತಿಯ ಹೊರಗಿನವನೂ ಅಲ್ಲ. ಯಾರಾರೊ ಶ್ರೀಮಂತರು ಬೇಕೆಂದು ಬಾಯಿ ಬಿಟ್ಟಿರುವುದೇಕೆ? ಈ ವಿಚಾರಕ್ಕೆ ನಾನು ಹೇಳಿದ್ದಲ್ಲ. ಡಾಕ್ಟರರ ಮಗನ ಆಸೆ ಮಾಡಿಕೊಂಡು ನೀವು ಕುಳಿತಿತ

ಬೇಡಿ. ಲಕ್ಷ್ಮಣನ ವಿಷಯದಲ್ಲಿ ಅವಳ ಇಷ್ಟ. ಅವಳನ್ನು ಇಂಟರಿಗೆ ಓದುವುದಕ್ಕಾದರೂ ಹಾಕಿ.

ಶಂಕರ—ಏನು ಅಸಂಬದ್ಧ ಮಾತನಾಡುತ್ತೀಯಾ ನೀನು! ಲಕ್ಷ್ಮಣನಿಗೆ ನಮ್ಮ ಮನೆಯ ಹೆಣ್ಣನ್ನು ಕೊಡುವುದೇ? ನಮಗೆ ಏನೂ ಒಂದು ಸ್ಥಿತಿ, ಗತಿ, ಇಲ್ಲವೆಂದು ತಿಳಿಯಬೇಕೇ? ನಾಳೆ ಊರವರು "ನಿಮಗೆ ಇನ್ನು ಯಾರೂ ಸಿಗಲಿಲ್ಲವೆ? ಊರಲ್ಲಿ ತಿರಿದು ತಿನ್ನುವ ಶೇಷಗಿರಿ ಮಗನಿಗೆ ಕೊಡಬೇಕೆ?" ಎಂದು ಕೇಳಿದರೆ? ಈಗೇನೋ ಆತ ಒಂದು ಅಂಗಡಿ ಇಟ್ಟಿದ್ದಾನೆ ನಿಜ. ಆದರೆ ನೆಂಟಸ್ತಿಕೆಗೆ, ಕುಲ, ಪ್ರತಿಷ್ಠೆ, ಒಂದೂ ಬೇಡವೆ?

ಸದಾ—ಅಪ್ಪಾ, ನೀವು ಹೆಣ್ಣು ಕೊಟ್ಟರೆ ಅದು ಶೇಷಗಿರಿಗಲ್ಲ ಅವನ ಮಗನಿಗೆ.

ಶಂಕರ—ನಿನ್ನ ಮಾತಿಗೇ ಅರ್ಥ ಇಲ್ಲ. ನಿನ್ನ ತಲೆಯಲ್ಲಿ ಹೊಸ ಸೋಶಲ್ ಐಡಿಯಾಸ್ ತುಂಬಿದೆ. ನಿನಗೆ ಎರಡೂ ಸರಿ ಸಮಾನರೇ. ಆದರೆ ನಾವು ಬದುಕಿರುವ ಸಮಾಜ ಆ ಮಟ್ಟಕ್ಕೆ ಬಂದ ಮೇಲೆ ನೀನೆನ್ನುವ ಮಾತು ಸಮ. ಈಗಿನ ಮಟ್ಟಿಗೆ ಲಕ್ಷ್ಮಣ ಒಬ್ಬ ಭಿಕಾರಿಯ ಮಗ. ಸಮಾಜದ ಮಟ್ಟಿಗೆ ಅವನು ಇಂದೂ ಹಾಗೆಯೆ. ನಾಳೆಯೂ ಹಾಗೆಯೆ. ನಾಳೆ ನೆಂಟರು, ಬೀಗರು, ಜತೆಗೆ ಕುಳಿತಿರುವುದು ಬೇಡ ಅನ್ನುತ್ತೀಯಾ?

ಸದಾ—ಬೇಡವಾದರೆ ಬಿಟ್ಟು ಬಿಡಿ. ನಾನು ನನ್ನ ದೃಷ್ಟಿಯಿಂದ ಹೇಳಿದೆ. ನಿಮ್ಮದು ಹೊಸ ಬಗೆಯ ಒಂದು ಸಂಪ್ರದಾಯ, ಅದು ಲಗ್ನವಾಗುವಾಗ ಅಲ್ಲ ಈಗ ಬೇಡ. ನನಗೆ ಇಷ್ಟೆಲ್ಲ ಆಗುವುದಕ್ಕೆ ಒಂದಕ್ಕೆ ನೂರು ಮಾಡಿ ಯಾರೋ ಚಾಡಿ ಬೆಸೆದಿದ್ದಾರೆಂದೇ ಕಾಣುತ್ತದೆ. ಶ್ರೀಮತಿಯನ್ನು ಕೇಳಿದರೆ ಹೇಳತ್ತಾಳಲ್ಲಾ? ಅವಳ ತಲೆಯಲ್ಲಿ ಈ ರೋಮಾನ್ಸ್, ಲವ್ಹ್, ಖಂಡಿತಕ್ಕೂ ಬಂದಿರಲಿಕ್ಕಿಲ್ಲ.

( ಯಾರೋ ಕದ ತಟ್ಟುವುದು ಕೇಳುತ್ತದೆ. )

ಶಂಕರ—ಯಾರೋ ಆಫೀಸಿಗೆ ಬಂದರಂತ ಕಾಣುತ್ತದೆ, ಹೋಗುತ್ತೇನೆ.

ಸದಾ—ಅಮ್ಮಾ, ಒಂದು ಸಂಗತಿಯನ್ನು ನಿನ್ನ ಹತ್ತಿರ ಕೇಳದೆ

ಮಾಡಿದ್ದೇನೆ. ಲಕ್ಷ್ಮಣನಿಗೆ ಊಟಕ್ಕೆ ನಾನು ಎಷ್ಟು ಒತ್ತಾಯ ಮಾಡಿದರೂ ಆತನು ಬರುವುದಿಲ್ಲವೆಂದ. ಕೊನೆಗೆ ಆಯಿತೆಂದ. ನಿನಗೇನೂ ಬೇಸರವಾಗದಷ್ಟೆ ?

ವಸಂತಿ—ನನಗೇನು ? ಬಂದು ಊಟ ಮಾಡಿ ಹೋಗಲಿ.

ಸದಾ—ನನಗೆ ನಿಮ್ಮ ವಿಪರೀತಗಳೊಂದೂ ತಿಳಿದಿರಲಿಲ್ಲ. ನಿಷ್ಕಾರಣವಾಗಿ ಅವನ ಮನಸ್ಸನ್ನು ನೋಯಿಸಿದ್ದೀರಿ ನೀವು. ಒಮ್ಮೆ ಆ ನೋವು ಮಾಯಲೀ ಎಂದು ಕರೆದೆ ನಾನು.

ವಸಂತಿ—ಕರೆದಾಯಿತಲ್ಲಾ ಮತ್ತೇನು ?

ಸದಾ—ನಿನಗೆ ಬೇಸರವೇ ? ಹಾಗಿದ್ದರೆ ಬೇಡವೆನ್ನುತ್ತೇನೆ.

ವಸಂತಿ—ಛೀ! ಹಾಗೇನೂ ಇಲ್ಲ. ನೀನು ನೆಂಟಸ್ತಿಕೆ ವಿಚಾರ ಮಾತ್ರ ಮಾತನಾಡದಿದ್ದರೆ ಸಾಕು.

ಸದಾ—ನಾನು ಯಾರ ನೆಂಟಸ್ತಿಕೆಯಲ್ಲಿಯೂ ಇಲ್ಲ. ನನ್ನದೂ ಬೇಡ, ಇನ್ನೊಬ್ಬರದ್ದೂ ಬೇಡ. ನಿಮಗೆ ಸರಿಬೀಳದೆ ಹೋದರೆ ಇನ್ನೊಮ್ಮೆ ಕರೆಯುವುದೂ ಇಲ್ಲ. ಇವತ್ತು ಬಂದುದಕ್ಕೆ ಸಿಟ್ಟಿದ್ದವಳಂತೆ ಮಾತ್ರ ತೋರಿಸಿಕೊಳ್ಳಬೇಡ.

ವಸಂತಿ—ನನಗೆ ಯಾತರ ಸಿಟ್ಟು ಮಗು ?

ಸದಾ—ಹಾಗಲ್ಲ. ಬಂದವನನ್ನು ಮಾತನಾಡಿಸದಿದ್ದರೂ ಅಷ್ಟೇ ಅರ್ಥ. ಆಗ ಅವನು ಮನೆಗೆ ಬಂದದ್ದು ತಪ್ಪು ಎಂದು ಅರ್ಥವಾಗುತ್ತದೆ. ಇವತ್ತಿನ ಮಟ್ಟಿಗೆ ತಪ್ಪು ನನ್ನದೇ ಎಂದು ತಿಳಿದುಕೊ. ಒಂದು ದಿನ ನಿಮ್ಮ ತಪ್ಪು ನಿಮಗೂ ತಿಳಿದೀತು.

ವಸಂತಿ—ಏನು ಸಿಹಿ, ಗಿಹಿ, ಮಾಡಬೇಕೆನ್ನುತ್ತೀಯಾ ?

ಸದಾ—ಮಾಡು, ಮಾಡಲಿಕ್ಕಾದರೂ ಮಾಡು. ಅವನಿಗಲ್ಲದಿದ್ದರೆ ನನಗಾದರೂ ಆಗುವುದಿಲ್ಲವೇ ?

ವಸಂತಿ—ಆಗಲಿ. ( ತೆರಳುವಳು. )

ಸದಾ—ಏನೋ ಇದೊಂದೂ ನನಗೆ ತಿಳಿಯದ ರಹಸ್ಯವಾಗಿದೆ. ಶ್ರೀಮತಿಯನ್ನು ಕೇಳಿದರೆ ತಿಳಿಯುತ್ತದೆಯಲ್ಲಾ. ಅಣ್ಣ ಯಾಕೆ ಇದನ್ನು ಇಷ್ಟು ಉದ್ದ ಮಾಡಬೇಕು? ಅಮ್ಮನಿಗೆ ಏನೇನೆಲ್ಲ ಹೇಳಿಕೊಟ್ಟಿದ್ದಾನೋ!

ಕೇಳಿದ್ದನ್ನೆಲ್ಲ ನಿಜವೆಂದು ತಿಳಿಯುವ ಸ್ವಭಾವ ಅವಳದ್ದು. ಲಕ್ಷ್ಮಣ ನಂಶೂ ತುಂಬ ನೊಂದಿಕೊಂಡಿದ್ದಾನೆ. ಶ್ರೀಮತಿ ಚೆನ್ನಾಗಿದ್ದಾಳೆಯೇ ಎಂದು ಕೇಳುವುದಕ್ಕೂ ಕೂಡ ಅಧೈರ್ಯ.

( ಚಿದಾನಂದ ಮತ್ತು ಶ್ರೀಮತಿ ಬರುವರು.)

ಸದಾ— ಎಲ್ಲಿಗೆ ಹೋಗಿದ್ದಿರಿ? ತಿರುಗಾಟಕ್ಕೆ?

ಚಿದಾನಂದ—ಈ ಊರಲ್ಲಿ ಏನು ನೋಡಲಿಕ್ಕಿದೆ? ಹೊತ್ತು ಹೋಗದುದಕ್ಕೆ ಊರೆಲ್ಲ ಸುತ್ತಾಡಿ ಬಂದೆವು. ಬೇಸರ ಬಂದಿತು; ಹಿಂದಿರುಗಿದೆವು. ಅಣ್ಣನನ್ನು ನೋಡಲಿಲ್ಲವಲ್ಲಾ ಎಂದು ಡಾಕ್ಟರರ ಮನೆಗೆ ಹೋದರೆ ಯಾಕೆ ಹೋದೆವೊ ಎಂದೆನಿಸಿತು.

ಸದಾ—ಅದೇನು ಸಂಗತಿ?

ಚಿದಾನಂದ—ನಾವು ಹೋಗುವಾಗ ಜವನು ತುಂಬ ಕೆಲಸದಲ್ಲಿದ್ದ ಹಾಗೆ ಕಂಡು ಒಳಕ್ಕೆ ಹೋದೆವು. ಸುಲೋಚನಾಬಾಯಿ ಇದ್ದರು. ಕಂಡವರೇ "ನೀವು ಯಾಕೆ ಬರುತ್ತೀರಿ ಬಡವರ ಮನೆಗೆ?" ಎಂದರು. ನಾನು ಊರಿಗೆ ಬಂದು ಎರಡು ದಿನವೂ ಆಗಿಲ್ಲ ಎಂದೆ. ಹೋದುದಕ್ಕೆ ಕಾಫಿ ಏನೊ ಸಿಕ್ಕಿತು. ಆದರೆ ಆ ಕಾಫಿ ಗಂಟಲಿನೊಳಗೆ ಇಳಿಯುವುದರೊಳಗೆ ನೂರು ಮಾತು ಕೇಳಬೇಕಾಯಿತು. ಅತ್ತಿಗೆ ಒಂದಿಷ್ಟು ಪುರಾಣ ತೆಗೆದಳು. ಎಲ್ಲ ನಮ್ಮ ಮನೆಯದ್ದೇ ದೂರು, ಫಿರ್ಯಾದು. ಅವರು ಮಾತನಾಡಿದ ರೀತಿಯನ್ನು ನೋಡಿದರೆ ನಾವು ಅಲ್ಲಿಗೆ ಬರುವುದು ಇಷ್ಟವಿದ್ದ ಹಾಗೆ ಕಾಣಿಸಲಿಲ್ಲ. ಏನು ಅಂತಹ ಪ್ರಕರಣ ನಡೆದಿದೆಯಂತೆ?

ಶ್ರೀಮತಿ—ಹೇಳಲಿಲ್ಲವೇ ಅವರು ಅದನ್ನೆಲ್ಲ? ನಮ್ಮ ಮನೆಯವರು ಆಸೆಯ ಪಿನಾರಿಗಳಂತೆ. ಊಟಕ್ಕೂ ಖರ್ಚು ಮಾಡುವವರಲ್ಲ. ಉಡಿವೆಗೂ ಖರ್ಚು ಮಾಡುವವರಲ್ಲ. ಸೇವಂತಿಗೆ ಇಡೀ ವರ್ಷದಲ್ಲಿ ಎರಡು ಸೀರೆ ಕೊಟ್ಟಿದ್ದೇವೆಂತೆ. ಮದುವೆಗೆ ಕೊಟ್ಟದ್ದು ಠಕಾರಿ ಸೀರೆ ಅಂತೆ. ಅದು ಮೂರು ತಿಂಗಳಲ್ಲಿ ಹರಿದು ಚೂರಾಯಿತಂತೆ. ಅವಳು ಇಲ್ಲಿದ್ದದ್ದು ನಾಲ್ಕು ದಿನವಾದರೂ ಹೊಟ್ಟೆಗೆ ಸಮನಾಗಿ ಅನ್ನ ಕೊಡಲಿಲ್ಲವಂತೆ. ಅದಕ್ಕೇನೆ ಅವರು ಅಳಿಯನನ್ನು ಅಲ್ಲಿಗೆ ಕರೆಯಿಸಿಕೊಂಡದ್ದಂತೆ.

ಸದಾ—ಹಾಗಿದ್ದರೆ ನಿಮ್ಮ ಹತ್ತಿರವೂ ಆ ಪುರಾಣವೆಲ್ಲ ಆಯಿತೇ ಇನ್ನೊಮ್ಮೆ ?

ಚಿದಾ—ಹೂಂ, ಆ ಮಾತನ್ನೆಲ್ಲ ಕಟ್ಟಿಕೊಂಡು ಏನು ಮಾಡಲಿ ? ಪ್ರಾಯಶಃ ಅವರು ನಾವು ಅವರೆಣಿಸಿಕೊಂಡಷ್ಟು ಶ್ರೀಮಂತರಲ್ಲವೆಂದು ಕೊಂಡಿರಬೇಕು. ಬೇಡ ಹೋಗಲಿ. ಅವರು ದೂರವಿದ್ದರೆ ನಾವೂ ದೂರ ಇದ್ದರಾಯಿತು.

ಆದರೆ ಶ್ರೀಮತಿಯನ್ನು ಮಾತ್ರ ಸ್ವಲ್ಪ ಕೆಣಕಿಯೇ ಮಾತನಾಡಿದ ಹಾಗಾಯಿತು. ಅವಳ ಸೀರೆಯನ್ನು 'ನೋಡಿ ಇದೇನು ವೈರಾಗ್ಯದ ಉಡು ಗೆಯೊ ?' ಎಂದು ಕೇಳಿದರು. ಆಮೇಲೆ ನನ್ನ ಹತ್ತಿರ "ಏನು ಚಿದಾ, ನಿನ್ನ ತಂದೆ ತಂಗಿಗೆ ಲಗ್ನ ಮಾಡದೆ ಮನೆಯಲ್ಲಿರಿಸಿಕೊಳ್ಳುತ್ತಾರೋ ? W. A. S. C. ವೇಕ್‌ಸ್‌ಟ್ರೈನಿಂಗ್‌ಗೋ, ನರಸಿಂಗ ಟ್ರೈನಿಂಗಿಗೊ ಕಳುಹಿ ಸುತ್ತಾರೆಯೆ ?" ಎಂದು ಹಂಗಿಸಿದರು. ಪ್ರತಿಯೊಂದೂ ಕೊಂಕು ನುಡಿಯೇ ಕಂಡಿತು ಏನಹ ಸರಳವಾಗಿ ನುಡಿಯಲಿಲ್ಲ. ಅವಳನ್ನೇನು ಮಾಡಿದರೆ ನಿಮಗೇನಾಯಿತು ಎಂದು ಹೇಳುವಷ್ಟು ಮನಸ್ಸಾಯಿತು. ನಾವೇ ಅವರ ಮನೆಗೆ ಹೋಗಿ ಸುಮ್ಮನೆ ಯಾಕೆ ಕೆಣಕಿ ಮಾತನಾಡಬೇಕೆಂದು ಕುಳಿತೆ. ತಮ್ಮ ಮನೆಗೆ ಯಾರೂ ಬರುವುದಿಲ್ಲ ಎನ್ನುವರೂ ಅವರೇ. ಬಂದರೆ ಹಂಗಿಸು ವವರೂ ಅವರೆ. ಏಕೆ ಅಲ್ಲಿಗೆ ಹೋಗುವುದು ? ಇಂಥ ಮಾತು ಕೇಳ ಲಿಕ್ಕೇನು ? ಪ್ರಾಯಶಃ ಇದೆಲ್ಲ ರಾಜಾರಾಮನಿಗೆ ಶ್ರೀಮತಿಯನ್ನು ಕೊಡಲಿಲ್ಲ ಎಂಬುದಕ್ಕೊ ಏನೊ.

ಸದಾ—ಛೀ, ರಾಜಾರಾಮ ಮದುವೆಯಾಗುವುದಿಲ್ಲವೆಂದು ಅವ ರಿಗೆ ಗೊತ್ತಿರಲಿಕ್ಕಿಲ್ಲವೆ ? ನಾವು ಒಪ್ಪಿದರೂ ಲಗ್ನವಾಗುತ್ತಿದ್ದಿಲ್ಲ. ಸುದಾ ಕರನ ಮೇಲೆ ಅವರ ಕಣ್ಣಿತ್ತು. ಅವರ ಕೆಲಸವಾಯಿತು. ಮನೆಯು ಅಳಿಯು ಸಿಕ್ಕಿದ. ಅಲ್ಲದೆ ಸುಲೋಚನಾಬಾಯಿಗೆ ಸೇವಂತಿ ಎಂದರೆ ತುಂಬ ಅಭಿಮಾನ. ಮಗಳು ಮನೆಯಲ್ಲಿಯೆ ಇರಬೇಕೆಂದು ತುಂಬ ಇಚ್ಛೆ. ಹಾಗೆ ಇನ್ನೊಬ್ಬ ಅಳಿಯನನ್ನು ಹುಡುಕಿ ಮನೆಯಲ್ಲಿರಿಸಿಕೊಳ್ಳಲಿ. ಆಮೇಲೆ ತಿಳಿದೀತು ಸುಖದುಃಖ.

ಚಿದಾ—ಹೋಗಲಿ. ಅವರು ಹಾಗೆನ್ನುವುದರಲ್ಲಿ ಆಶ್ಚರ್ಯವಿಲ್ಲ.

ಅಣ್ಣನಾದರೂ ಸಮನಾಗಿ ಮಾತನಾಡಬೇಡವೇ? ಅವನು ಎರಡು ಮಾತಿನಲ್ಲೇ ಮುಗಿಸಿಬಿಟ್ಟ. 'ಯಾವಾಗ ಬಂದದ್ದು ಎಂದು ಕೇಳಿದ?' 'ಮೊನ್ನೆ' ಎಂದೆ. 'ಎಷ್ಟು ದಿನ ಇದ್ದಿಯಾ?' ಎಂದು ಕೇಳಿ ಹೊರಟೇ ಬಿಟ್ಟ.

ಸದಾ—ಅಣ್ಣನ ಮರ್ಜಿ ಬಹಳ ಬದಲಾಗಿದೆ. ಅವನಿಗೆ ನಮ್ಮೆಲ್ಲರ ಮರವೆಯಾಗಿದೆ. ಮಾವನೇ ದೇವರು ಈಗ ತಂದೆ ಇಷ್ಟೆಲ್ಲ ಕಲಿಸಿದ್ದು, ಮಾಡಿದ್ದು ಅದರ ನೆನಪೇ ಹೋಗಿದೆ. ಇಲ್ಲಿ ಮನೆಯಲ್ಲಿಯೇ ಇದ್ದರೆ ಖರ್ಚಿಗೆ ಹಾಕಬೇಕಾಗುತ್ತದೆ. ಅಪ್ಪನೂ ಮೊದಲಿನ ಸಂಪಾದನೆ ಇಲ್ಲಾ ಅನ್ನುತ್ತಾರೆ. ಅಂಥ ಸಂದರ್ಭದಲ್ಲಿ ದೂರ ಇರುವುದೇ ಸುಖ ಎಂದು ಕಾಣುತ್ತದೆ. ಇತ್ತ ನಮ್ಮನ್ನು ಮಾತನಾಡಿಸಿದರೂ ಕಷ್ಟವೇ ಎಂದು ಕಾಣುತ್ತದೆ. ನಮ್ಮ ವಿದ್ಯೆಗೆ ಏನಾದರೂ ಕೊಡಬೇಕಾದೀತು ಎಂಬ ಹೆದರಿಕೆ. ಅದಕ್ಕೇನೆ ಮಾತು ಕಡಿಮೆ ಮಾಡಿದ್ದಾನೆ.

ಅಯ್ಯೋ, ಇವನು ಕೊಡದೆ ಹೋದರೆ ಏನಾಗುತ್ತದೆ? ಎಲ್ಲಾದರೂ ನೌಕರಿಗೆ ಸೇರುವುದು. ಅನುಕೂಲವಾದರೆ ಓದಿದ. ಇಲ್ಲವಾದರೆ ಬಿಟ್ಟ.

ಚಿದಾ— ( ನಿಟ್ಟುಸಿರು ಬಿಟ್ಟು. ) ಇಷ್ಟೆಲ್ಲ ಬದಲಾವಣೆ ಆಗಿದೆಯು? ಅಮ್ಮ, ಅಪ್ಪ, ಸೂಚನೆಗೂ ಒಂದು ಸಂಗತಿ ಹೇಳಲಿಲ್ಲ. ಅಲ್ಲಿಗೆ ನಾನು ಹೋಗುತ್ತಲೇ ಇರಲಿಲ್ಲ. ಇನ್ನು ಹೋಗುವುದೂ ಇಲ್ಲ.

ಸದಾ—ಸಾಕು ಬಿಡು ಆ ವಿಚಾರ—ಸಂಸಾರವೆಂದರೆ ಹಾಗೆ. ಚಿಕ್ಕವರಾಗಿರುವಾಗ ನಾವು ನಮ್ಮ ನಮ್ಮವರು ಎಂಬ ಯೋಚನೆ ಇರುತ್ತದೆ. ಸ್ವಂತ ಸಂಪಾದನೆ ಕಲಿತು ದೊಡ್ಡವನಾದ ಮೇಲೆ, ಪ್ರಪಂಚವೆನ್ನುವುದು ತಾನು, ತನ್ನ ಹೆಂಡತಿ ಎನ್ನುವುದರಲ್ಲಿ ಮುಗಿದುಹೋಗಿಬಿಡುತ್ತದೆ.

ಚಿದಾ— ಆದರೆ ಸೇವಂತಿ, ಶ್ರೀಮತಿಯನ್ನು ಯಾಕೆ ಹಂಗಿಸಬೇಕಿತ್ತು?

ಸದಾ—ಅದು ಇನ್ನೊಂದು ರೀತಿ. ತಮ್ಮ ಶ್ರೀಮಂತಿಕೆಯನ್ನು ತೋರಿಸುವ ಡೌಲು. ಅಲ್ಲದೆ ಶಾಲೆಯಲ್ಲಿ ಓದುತ್ತಿರುವಾಗಲೂ ಇವಳನ್ನು ಕಂಡರೆ ಅಷ್ಟೊಂದು ಆಗುತ್ತಿರಲಿಲ್ಲವಂತೆ. ಬಾಯಲ್ಲಿ ಬೇಕಾದರೆ ಶ್ರೀಮತಿ ಯಾಕೆ ಕಾಲೇಜಿಗೆ ಸೇರಲಿಲ್ಲಾ ಎಂದು ಕೇಳಬಹುದು. ನಾಳೆ ನಿಜಕ್ಕೂ ಹಾಗೆ ಮಾಡಿ ಇವಳಂತೆ ಇಂಟರ್ ಮಾಡಿ ಮುಂದೆ

ಬಿ. ಎ.ಗೆ ಹೋದರೆ ಅಸೂಯೆ ಆಗುವ ದಿನ ಒಂದು ಉಂಟು. ಹೋಗಲಿ ಅವರ ಸುದ್ದಿ ನಿನಗೆ ದಣಿವಾಗಲಿಲ್ಲವಾದರೆ ಒಂದು ಕೆಲಸ ಮಾಡು ತ್ತೀಯಾ ?

ಚಿದಾ—ದಣಿವೇನು ? ಅವರ ಮಾತೆಲ್ಲ ಕೇಳಿ ಕರಕರೆಯಾಗಿತ್ತು.

ಸದಾ—ಲಕ್ಷ್ಮಣನ ಮನೆಗೆ ಹೋಗಿಬರುತ್ತೀಯಾ ?

ಚಿದಾ—ಲಕ್ಷ್ಮಣನಿದ್ದಾನೆಯೇ ಊರಲ್ಲಿ? ಏನು ಮಾಡುತ್ತಿದ್ದಾನೆ ಈಗ?

ಸದಾ—ಊರಿಗೆ ಬಂದಿದ್ದಾನೆ. ಓದು ಮುಗಿದ ಮೇಲೆ ಮಿಲಿಟ್ರಿ ಟ್ರೈನಿಂಗಿಗೆ ಹೋದ. ಈಗ ಅವನ ತಂದೆಯೊಂದು ಸಣ್ಣ ಅಂಗಡಿ ಇಟ್ಟಿದ್ದಾನೆ. ಅದರಲ್ಲಿ ಕುಳಿತಿದ್ದಾನೆ. ಅವನನ್ನು ಊಟಕ್ಕೆ ಬರಹೇಳಿದೆ. ತಪ್ಪಿಸಿಬಿಟ್ಟಾನು. ನೀನು ಅವನನ್ನು ಕರಕೊಂಡು ಬರಲೇಬೇಕು.

ಚಿದಾ—ಲಕ್ಷ್ಮಣ ಬಂದಿದ್ದಾನೆ ಹಾಗಾದರೆ. ನಾನು ಅವನನ್ನು ಕಾಣದೆ ಬಹಳ ದಿವಸವಾಯಿತು. ಸುಧಾನ ಮದುವೆಯ ಸಮಯದಲ್ಲಿ ಊರಲ್ಲಿಯೇ ಇದ್ದನಂತೆ. ಆದರೂ ಬರಲೇ ಇಲ್ಲ ನೋಡು !

ಸದಾ—ಹೋಗು, ಅವನು ಎಲ್ಲಿಯಾದರೂ ತಿರುಗಾಡಲು ಹೋಗುವ ಮೊದಲೇ. ( ತೆರಳುವನು. ) ನನ್ನ ಅನುಭವಕ್ಕೂ, ಚಿದಾನಂದನ ಅನು ಭವಕ್ಕೂ ವ್ಯತ್ಯಾಸ ಇಲ್ಲವೆಂದಾಯಿತು. ಶ್ರೀಮತಿ, ಈ ವಿಚಾರ ಒಂದನ್ನೂ ಅಮ್ಮನಿಗೆ ಹೇಳಬೇಡ.

ಶ್ರೀಮತಿ—ಕರೆದೀಯೇನಣ್ಣ ?

ಸದಾ— ಬಾ ಇಲ್ಲಿ. ಅಲ್ಲಿ ಕೇಳಿದ್ದನ್ನೆಲ್ಲ ಅಪ್ಪನಿಗಾಗಲಿ, ಅಮ್ಮನಿ ಗಾಗಲಿ ಹೇಳಿಬಿಡಬೇಡ.

ಶ್ರೀಮತಿ—ನಾನು ಯಾರ ಎದುರು ಏನನ್ನೂ ಹೇಳುವುದಿಲ್ಲ. ಇದ ನ್ನಾದರೂ ನೀವು ಅಪೂರ್ವಕ್ಕೆ ಬಂದವ ಎಂದು ಹೇಳಿದೆ. ನನಗೆ ಈ ಮನೆಯೂ ಬೇಕಾಗಿಲ್ಲ. ಆ ಮನೆಯೂ ಬೇಕಾಗಿಲ್ಲ.

ಸದಾ —ಹಾಗೇಕೆ ಅನ್ನುತ್ತೀ ? ಅಪ್ಪ ಅಮ್ಮ ನಿನಗೇನು ಮಾಡಿದರು?

ಶ್ರೀಮತಿ—ಯಾರು ಏನೂ ಮಾಡಲಿಲ್ಲ. ಏನು ಮಾಡಿದ್ದರೂ ನನ್ನ ದುರ್ದೈವ.

ಸದಾ—ಯಾಕೆ ಇಷ್ಟು ಬೇಸರ ನಿನಗೆ? ಅದಕ್ಕೇನೆ ಅಪ್ಪನ ಹತ್ತಿರ ಮಾತನಾಡುತ್ತಿದ್ದೆ. ಅವಳನ್ನು ಮನೆಯಲ್ಲಿ ಸುಮ್ಮನೆ ಬಿಡಬೇಡಿ,

ಇಂಟರನ್ನಾದರೂ ಓದಲಿ ಅವಳು ಎಂದೆ. ಅವರಿಗೇಕೊ ಅಷ್ಟು ಹಿಡಿಸ ಲಿಲ್ಲ. ಅಲ್ಲದೆ ಮೊದಲಿನ ಉತ್ಸಾಹ ಅವರಿಗೆ ಇಲ್ಲ. ಹಣದ ಅಡಚಣೆ ತುಂಬ ಎಂದು ಕಾಣುತ್ತದೆ.

ಶ್ರೀಮತಿ—ನನಗೆ ಲಗ್ನವೂ ಬೇಡ ಓದೂ ಬೇಡ.

ಸದಾ—ಇದೇನು ವೈರಾಗ್ಯ ಶ್ರೀಮತಿ? ನಿನ್ನಲ್ಲಿ ಒಂದು ಸಂಗತಿ ಯನ್ನು ಕೇಳಬೇಕೆಂದಿತ್ತು. ನನ್ನಲ್ಲಿ ವಿಶ್ವಾಸವಿದ್ದರೆ ಹೇಳು. ಯಾರಾ ಹತ್ತಿರವೂ ಹೇಳುತ್ತೇನೆಂದು ತಿಳಿಯಬೇಡ. ಏತಕ್ಕಾಗಿ ನೀನು ಬೇಸರ ಪಟ್ಟುಕೊಂಡಿದ್ದೀ ಎಂಬುದು ನನಗೆ ಗೊತ್ತು. ಕಳೆದ ವರ್ಷವೂ ಹಾಗೆಯೇ ಇದ್ದೆ. ಈ ವರ್ಷ ಇನ್ನಷ್ಟು ಹೆಚ್ಚಿಗೆ ಬೇಸರದಲ್ಲಿದ್ದೀ.

ಶ್ರೀಮತಿ—ನನಗೇನೂ ಬೇಸರವಿಲ್ಲ.

ಸದಾ—ನೀನು ಇಲ್ಲವೆಂದರೂ ನಿನ್ನ ನಡೆನುಡಿ ಹೇಳುತ್ತಿವೆಯಲ್ಲಾ!

ಶ್ರೀಮತಿ—ಹಾಗೆ ನೀನು ತಿಳಿದಿದ್ದೀ.

ಸದಾ—ನೀನು ಏನನ್ನೋ ಅಡಗಿಸುತ್ತಿದ್ದೀಯು. ನಾನು ಸುಧಾರಕನ ಹಾಗೆಂದು ತಿಳಿದಿದ್ದೀಯು? ಅವನು ನಿನ್ನ ವಿಷಯದಲ್ಲಿ ಮನೆ ತುಂಬ ಗದ್ದಲ ಮಾಡಿದ್ದು ಕೇಳಿದೆ.

ಶ್ರೀಮತಿ—ನನ್ನೊಬ್ಬಳ ವಿಷಯದಲ್ಲಿ ಅನ್ನುತ್ತಿದ್ದರೂ ಬೇಸರವಿರು ತ್ತಿರಲಿಲ್ಲ. ಅವನು ಅನ್ಯಾಯವಾಗಿ ಪಾಪದವರನ್ನು ಅಪರಾಧಿಗಳನ್ನಾಗಿ ಮಾಡಿದ.

ಸದಾ—ಲಕ್ಷ್ಮಣನ ವಿಚಾರವಲ್ಲವೇ? ನನಗೆಲ್ಲ ಗೊತ್ತು. ಅವನೇ ನನಗೆ ಎಲ್ಲವನ್ನೂ ಹೇಳಿದ್ದಾನೆ ಒಂದೂವರೆ ವರ್ಷದಿಂದ ಅವನು ನಮ್ಮ ಮನೆಗೆ ಬಂದಿಲ್ಲವಂತೆ. ಅಮ್ಮನೂ ಅವನನ್ನು ಮನೆಗೆ ಬರಬೇಡ ವೆಂದಿದ್ದಾಳಂತೆ. ಅಣ್ಣನಂತೂ ಹೇಳಿರಲೇಬೇಕು.

ಶ್ರೀಮತಿ— ಅವಗೇನು ಆಗಬೇಕು? ಲಕ್ಷ್ಮಣ ಈ ಮನೆಯಲ್ಲಿ ಧರ್ಮಾರ್ಥವಾಗಿ ನಾಲ್ಕು ವರ್ಷ ಅನ್ನ ತಿಂದನಲ್ಲವೇ? ಅದೇ ಅವನ ತಾತ್ಸಾರಕ್ಕೆ ಕಾರಣವಾಯಿತು. ನನ್ನ ಹತ್ತಿರ ಲಕ್ಷ್ಮಣ ಚೆನ್ನಾಗಿ ಮಾತ ನಾಡುತ್ತಿದ್ದುದನ್ನು ಕಂಡು ಅವನಿಗೆ ಸಹಿಸದಾಯಿತು.

ಸದಾ—ಶ್ರೀ, ಅದನ್ನೆಲ್ಲ ಕೇಳಿದ್ದೇನೆ. ಅದೇ ವಿಷಯವಾಗಿ ನಿನ್ನನ್ನೂ

ಕೇಳಬೇಕೆಂದಿದ್ದೆ. ನೀನು ಹೇಳುವುದಾದರೆ...

ಶ್ರೀಮತಿ— ನನ್ನ ಹತ್ತಿರ ಹೇಳುವುದೇನಿದೆ—ಯಾರಿಗೂ ತಿಳಿಯದ ವಿಷಯ ?

ಸದಾ— ನಿನ್ನ ಮತ್ತು ಲಕ್ಷ್ಮಣನ ವಿಷಯ ಅಣ್ಣ ಮಾಡಿದ ಟೀಕೆ ಸುಳ್ಳೇ ?

ಶ್ರೀಮತಿ—ಸುಳ್ಳೇನು ಸತ್ಯವೇನು ? ನಾನು ಅವನ ವಕೀಲ ಎಂದ. ಅವನನ್ನು ಲಗ್ನ ಆಗುವ ಯೋಚನೆ ಎಂದ. ಅದಕ್ಕಾಗಿಯೇ ಡಾಕ್ಟರ ಮನೆಯ ಸಂಬಂಧ ನಾನು ಬೇಡವೆಂದೆನಂತೆ. (ಅಳುವಳು).

ಸದಾ— ನೀನು ಯಾಕೆ ಅಳುತ್ತೀಯಾ ? ಬಾ. ಕುಳಿತುಕೊ. ಏನಿದ್ದರೂ ನನ್ನ ಹತ್ತಿರ ಹೇಳು. ಅಪ್ಪಾ, ಅಮ್ಮನಿಗೆ ಹೇಳಿ ನೋಡುತ್ತೇನೆ

ಶ್ರೀಮತಿ—ನೀನು ಯಾರಿಗೆ ಏನನ್ನು ಹೇಳುವುದೂ ಬೇಡ. ನನ್ನ ಮನಸ್ಸು ನನಗೆ ಗೊತ್ತಿದೆ, ಅಷ್ಟೇ ಸಾಕು. ಆಡುವವರ ಬಾಯನ್ನೆಲ್ಲ ತಡೆಯುವುದಕ್ಕೆ ಬಂದೀತೆ? ಅದನ್ನು ದೇವರು ತಡೆಯಬೇಕು.

ಸದಾ— ಹಾಗಿದ್ದರೆ ಅಣ್ಣನ ಮಾತಿನಲ್ಲಿ ಸತ್ಯವೇ ಇಲ್ಲವೆನ್ನುತ್ತೀಯ?

ಶ್ರೀಮತಿ—ನೀನು ಕೇಳುವುದಕ್ಕೆ ಹೇಳುತ್ತಿದ್ದೇನೆ. ಬೇರೆಯವರಿಗೆ ಹೇಳಿದರೆ ನನ್ನಾಣೆ ಇದೆ.

ಸದಾ—ಏನದು ಶ್ರೀ ? ಧೈರ್ಯವಾಗಿ ಹೇಳು. ನಿನಗೆ ಸರಿಯಾಗಿ ತೋರಿದ್ದನ್ನು ಹೇಳು. ಯಾಕೆ ಅಂಜಿಕೆ ? ಮದುವೆಯ ವಿಷಯ ಹಾಗೆಯೆ ಇರಬೇಕು. ಅವರವರಿಗೆ ಒಪ್ಪಿದರೆ ಮಾತ್ರ ಆ ಮಾತು. ಅಪ್ಪ, ನನ್ನನ್ನು ಲಗ್ನಕ್ಕೆ ಬಲವಂತ ಮಾಡಿದ. ನಾನು ಖಂಡಿತವಾಗಿಯೂ ಬೇಡವೆಂದೆ. ಅದರ ಸುಖದುಃಖ ಏನಿದ್ದರೂ ನಮನಮಗೆ.... ಹಾಗೆ ಎಂದಾದರೂ ನೀನು ಲಕ್ಷ್ಮಣನನ್ನು ಮದುವೆಯಾಗಬಹುದೆಂದು ಯೋಚಿಸಿಕೊಂಡಿದ್ದೀಯ ?

ಶ್ರೀಮತಿ—ಎಂದಾದರೂ ಇಲ್ಲ. ಈಗೇನೋ ಮನಸ್ಸಿನಲ್ಲಿ ಹಾಗೆ ಏಕೆ ಆಗಬಾರದು ಎನಿಸುತ್ತದೆ. ಅವನೇನು ಅಪರಾಧಿ? ನನ್ನಿಂದಾಗಿ ಅವನ ಪಾಲಿಗೂ ದೂರು ಬಂದಿತು. ಬರಿಯ ದೂರು ಏಕೆ ಹೊತ್ತಿರಬೇಕು ? ದೂರು ಸತ್ಯವಾಗಲಿ. ಇವರೆಲ್ಲ ಇಷ್ಟು ಗದ್ದಲವೆಬ್ಬಿಸಿದ್ದು ಅಣ್ಣನ

ಮದುವೆಗೆ ಮೊದಲು, ಡಾಕ್ಟರ ಮನೆಯವರು ಮದುವೆಯ ವಿಷಯಕ್ಕೆ ಮನೆಗೆ ಬಂದಾಗ. ಆಗ ಅಣ್ಣ, ಲಕ್ಷ್ಮಣನ ವಿಷಯವನ್ನು ನಾನು ಕನಸಿನಲ್ಲಿಯೂ ಎಣಿಸಿರಲಿಲ್ಲ. ಲಕ್ಷ್ಮಣನ ಮೇಲೆ ನನಗೆ ತುಂಬ ಪ್ರೀತಿ ಇದೆ ನಿಜ. ನಾನೆಂದರೆ ಅವನಿಗೆ ಜೀವ. ಆದರೆ ಇನ್ನೊಂದು ಅರ್ಥದ ಸ್ನೇಹ ನನಗೆ ಕಾಣಿಸಿರಲಿಲ್ಲ. ನನ್ನದು ಒಂದು ತಪ್ಪಿತ್ತೆಂದು ನಿಜ. ಅದೆಂದರೆ— ಅವನಿಗೆ ಊಟಕ್ಕೂ ಬಿಡುವು ಕೊಡದೆ ಅವನಿಂದ ಜವಾನನ ಹಾಗೆ ಕೆಲಸ ಮಾಡಿಸುತ್ತಿದ್ದರು. ನನಗೆ ಅದನ್ನು ಕಂಡರೆ ಆಗಲಿಲ್ಲ. ಅವನು ಬಡವನಾಗಿರಬಹುದು. ನಮ್ಮಲ್ಲಿ ಊಟಕ್ಕೆ ಇದ್ದಿರಬಹುದು. ಅವನು ಬಿ. ಎ. ಮುಗಿಸಿ ಬಂದ ಮೇಲೆಯೂ ಅವನನ್ನು ಜವಾನನ ಹಾಗೆ ಕಂಡರೆ? ಅದಕ್ಕಾಗಿ ಒಂದೆರಡಾವರ್ತಿ ಅಣ್ಣನೊಂದಿಗೆ ಜಗಳ ಮಾಡಿದೆ. ಅದು ಇಷ್ಟೆಲ್ಲ ಅನರ್ಥಕ್ಕೆ ಕಾರಣವಾಯಿತು.

ಸದಾ—ಅದನ್ನು ನಾನೂ ಕಂಡಿದ್ದೇನೆ.

ಶ್ರೀಮತಿ—ಅದಕ್ಕೇನೆ ಅಣ್ಣ—ಅವನು ಈ ಮನೆಗೆ ಬರಬಾರದು. ನಮಗೆ ಕೆಟ್ಟ ಹೆಸರು ಬಂದೀತು ಎಂದು ಅಮ್ಮನಿಗೆ ಚುಚ್ಚಿಕೊಟ್ಟ. ಅಮ್ಮನ ಸ್ವಭಾವ ನಿನಗೆ ಗೊತ್ತಿದೆ. ಅವಳ ಕಿವಿ ಹಿತ್ತಾಳಿಯದು. ಅವಳೂ ನನ್ನ ಹತ್ತಿರ 'ಇದು ನಿಜವೇ' ಎಂದು ಕೇಳಿದ್ದು. ಲಕ್ಷ್ಮಣನಿಗೂ 'ನೀನು ಮನೆಗೆ ಬರಬೇಡ' ಎಂದಿರಬೇಕು. ಆ ದಿವಸ ಅವರೆಲ್ಲ ಮನೆಗೆ ಊಟಕ್ಕೆ ಬಂದಾಗ, ಅವನನ್ನು ಮಧ್ಯಾಹ್ನ ಎರಡು ಗಂಟೆಯ ತನಕ ದುಡಿಸಿ ಒಂದು ಲೋಟ ಕಾಫಿಯನ್ನು ಸಹ ಕೊಡದೆ ಆ ಬಿಸಿಲಿಗೆ ಅವನನ್ನು ಮನೆಗೇನೆ ಊಟಕ್ಕೆ ಕಳುಹಿಸಿದರು. ಕೆಲಸ ಮಾಡುವುದಕ್ಕೆ ಅವನು ಘಟಿಂಗನಾದರೂ ಆಗಬಹುದು. ಊಟಕ್ಕೆ ಕರೆಯುವಾಗ ಮಾತ್ರ ಅವನು ಬೇಕಾಗುವುದಿಲ್ಲ. ನನಗೆ ಅದನ್ನೆಲ್ಲ ಕಂಡು ತುಂಬ ನೋವಾಯಿತು.

ಸದಾ— ಆಮೇಲೆ?

ಶ್ರೀಮತಿ— ಆಮೇಲೇನು? ಅವನೇ ಇಲ್ಲಿಗೆ ಬರಲಿಲ್ಲ.

ಸದಾ—ನೀನು ಅವನನ್ನು ಕಾಣಲೇ ಇಲ್ಲವೇ?

ಶ್ರೀಮತಿ—ದೂರದಲ್ಲಿ ಒಂದೆರಡು ಸರ್ತಿ ಕಂಡಿದ್ದೆ. ಆದರೆ ಇಷ್ಟೆಲ್ಲ ನನ್ನ ಸಲುವಾಗಿ ಆಯಿತೆಂದು ತಿಳಿದಿರುವಾಗ ನಾನೇನು ಮಾಡಬೇಕು?

ಅವನನ್ನು ಮಾತನಾಡಿಸುವುದಕ್ಕೂ ಧೈರ್ಯವಾಗಲಿಲ್ಲ. ಆದರೆ ಇನ್ನು ಖಂಡಿತ ಮಾಡಿದ್ದೇನೆ

ಸದಾ—ಏನೆಂದು ?

ಶ್ರೀಮತಿ— ನಾಳೆ ನನಗೆ ಪ್ರಾಯ ಬಂದ ಮೇಲೆ, ಯಾರನ್ನೂ ಕೇಳುವುದಿಲ್ಲ. ಅವನನ್ನೇ ಲಗ್ನವಾಗುತ್ತೇನೆ. ಅವನೇ ಸಾಕು ನನಗೆ. ಶ್ರೀಮಂತರು ಬೇಡ.

ಸದಾ—ಮೊದಲಿನಿಂದಲೂ ಹಾಗೆ ಯೋಚನೆ ಮಾಡಿದ್ದೆಯಾ ?

ಶ್ರೀಮತಿ— ನೀನು ನಂಬಿದರೆ ನಂಬು, ಬಿಟ್ಟರೆ ಬಿಡು. ನಾನು ಮೊದಲು ಏನೂ ಯೋಚಿಸಿರಲಿಲ್ಲ. ಇವರೆಲ್ಲ ಅವನನ್ನು ಅಷ್ಟು ದ್ವೇಷಿಸುವದರಿಂದಲೇ ಅವನ ಮೇಲೆ ನನ್ನ ಕರುಣೆ ಹೆಚ್ಚಿತು. ಮೊದಲಿನಿಂದಲೂ ಅವನ ಮೇಲೆ ನನಗೆ ತುಂಬ ಅಭಿಮಾನ. ಈಗ ಮನಸ್ಸಿನಲ್ಲಿ ಅವನ ವಿಷಯವಾದ ಪ್ರೀತಿಯು ಅಂಕುರಿಸಿದೆ. ಲಗ್ನವಾಗುವುದಾದರೆ ಅವನನ್ನೇ ಆಗುತ್ತೇನೆ. ಇಲ್ಲವಾದರೆ ಬೇಡ. ಅವರೆಲ್ಲರು ಹೇಳಿದಂತೆಯೇ ಆಗಲಿ. ಹಾಳಾದರೆ ನಾನು ಒಬ್ಬಳೇ ಅಲ್ಲವೆ ? (ದುಃಖಿಸುವಳು).

ಸದಾ— ನೀನೇಕೆ ಅಳಬೇಕು ಶ್ರೀಮತಿ? ನಿನ್ನ ವಿಚಾರ ನನಗೆ ತಪ್ಪೆಂದು ಕಾಣುವುದಿಲ್ಲ. ಲಕ್ಷ್ಮಣನು ಯೋಗ್ಯ ಹುಡುಗ. ಅಪ್ಪನಿಗೆ ಮಾತ್ರ ಅವನ ಕುಲಗಿಲ ಸರಿಬೀಳದು. ಆದರೆ ಅವಸರ ಮಾಡದಿದ್ದಲ್ಲಿ ಅವರನ್ನೂ ಒಪ್ಪಿಸಬಹುದು. ಆದರೆ ಲಕ್ಷ್ಮಣನ ಮನಸ್ಸು ಏನೆಂದು ತಿಳಿಯಬೇಡವೆ ? ನೀನು ಅವನಿಗೇನಾದರೂ ಹೇಳಿದ್ದೀಯಾ ?

ಶ್ರೀಮತಿ— ತಿಳಿಸಬೇಕೆಂದಿದೆ. ಆದರೆ ಅವನು ಇಲ್ಲಿಗೆ ಬಂದರಲ್ಲವೆ ತಿಳಿಸುವುದು ? ಹಾಗೆ ಯಾರ ಮೂಲಕ ಹೇಳಿ ಕಳುಹಿಸಲಿಕ್ಕೂ ಉಪಾಯ ವಿಲ್ಲ. ಅಲ್ಲದೆ ಇಲ್ಲಿ ಏನಾದರೂ ಡಾಕ್ಟರ ಮನೆಗೆ ಸುದ್ದಿಯನ್ನು ಒಯ್ದು ಮುಟ್ಟಿಸುವವರಿದ್ದಾರೆ. ಆದರೆ ಅಣ್ಣ, ಈ ವಿಷಯ ಯಾರಲ್ಲಿಯೂ ಬೇಡ.

ಸದಾ— ನನ್ನ ಮೇಲೆ ನಿನಗೆ ಏಕೆ ಅವಿಶ್ವಾಸ ? ಪ್ರಸಂಗ ಬಂದರೆ ನಾನೇ ಲಕ್ಷ್ಮಣನಿಗೆ ಸೂಚಿಸುತ್ತೇನೆ. ನಮ್ಮ ಅಮ್ಮ ಅಪ್ಪನಿಗೆ ಬೇಡವಾದರೂ ನನಗೆ ತುಂಬ ಬೇಕಾದವ. ಅವನು ಬಡವನಾದರೆ ಏನಾಯಿತು ?

ಎಷ್ಟೋ ಜನ ಶ್ರೀಮಂತರ ಬುದ್ಧಿ ಭಿಕ್ಷುಕರಿಗಿಂತ ಕೇಡು. ಆದರೆ ಒಂದು ವಿಚಾರ. ಲಕ್ಷ್ಮಣನಿಗೆ ಈ ಸಂಗತಿ ತಿಳಿಯದೆ ಇದ್ದುದರಿಂದ ಆತ ಬೇರೆ ಯಾರಿಗಾದರೂ ಮಾತು ಕೊಟ್ಟರೆ ತುಂಬ ಕಷ್ಟವಲ್ಲವೇ ?

ಶ್ರೀಮತಿ—ಹೋಗಲಿ, ನನಗೆ ಅದೃಷ್ಟವಿಲ್ಲ ಎಂದು ತಿಳಿದರಾಯಿತು. ಅಣ್ಣ ಅಷ್ಟು ಅನ್ಯಾಯ ನುಡಿದುದಕ್ಕಾದರೂ ನನಗೆ ಲಗ್ನವಾಗಬೇಕೆಂಬಷ್ಟು ಹಟ. ನನ್ನ ಲಗ್ನಕ್ಕೆ ಅವನು ಬರಬೇಕಾಗಿಯೂ ಇಲ್ಲ. ಅವನು ನಮ್ಮನ್ನು ಕರೆದು ಊಟ ಹಾಕಬೇಕಾಗಿಯೂ ಇಲ್ಲ.

ಸದಾ—ಇವತ್ತು ಲಕ್ಷ್ಮಣ ಮನೆಗೆ ಬರುತ್ತಾನೆ ಗೊತ್ತೇ ನಿನಗೆ ?

ಶ್ರೀಮತಿ— ನಿಜವೇ ! ಬರುತ್ತಾನೆಯೋ ? ಬರಲಾರ. ಅಮ್ಮ ಹಾಗೆ ಮಾಡಿ ಇರಿಸಿದ್ದಾಳೆ.

ಸದಾ—ಇಷ್ಟು ಹೊತ್ತೆಲ್ಲಾ ಅಮ್ಮನ ಹತ್ತಿರ ತರ್ಕ ಮಾಡಿ ಅವಳನ್ನು ಒಪ್ಪಿಸಿದೆನು. ಆಮೇಲೆ ಚಿದಾನಂದನನ್ನು ಕಳುಹಿಸಿದ್ದು.

ಶ್ರೀಮತಿ—ಅಣ್ಣಾ, ಅಲ್ಲಿ ತಂದೆಯವರ ಹತ್ತಿರ ಮಾತನಾಡಲು ಬಂದದ್ದು ಯಾರೆಂದು ಗೊತ್ತಿದೆಯೋ ?

ಸದಾ—ಯಾರೊ ಕಕ್ಷಿಗಾರರಿರಬೇಕು.

ಶ್ರೀಮತಿ—ಕಕ್ಷಿಗಾರರಲ್ಲ. ಅವರು ಈ ಒಂದೆರಡು ತಿಂಗಳಿನಲ್ಲಿ ಎಂಟು, ಒಂಭತ್ತು ಸಾರಿ ಬಂದು ಹೋದರು. ನಿನ್ನೆ ಶಿಖಾರಿಗೆ ಬಂದವರು ಅವರು.

ಸದಾ—ಹಾಗೋ. ತುಂಬ ಪಿಸಿಪಿಸಿ ಗುಟ್ಟು ಮಾತನಾಡುವುದು ಕಾಣುತ್ತದೆ. ( ಬಂದರೆಂದು ಕಾಣುತ್ತದೆ. ನೀನು ಒಳಗೆ ಹೋಗು. )

( ಶ್ರೀಮತಿ ತೆರಳುವಳು. )

ಪಾಪ ! ಲಕ್ಷ್ಮಣನ ಹೆಸರನ್ನು ಕೇಳಿದರೆ ಶ್ರೀಮತಿಯ ಮುಖ ಹೂವಿನಂತೆ ಅರಳುತ್ತದೆ. ಅವಳಿಗೇನು ಗೊತ್ತಿದೆ, ಹಣದಿಂದ ಅಳೆಯುವ ಸ್ಥಾನಮಾನದ ವಿಚಾರಗಳು ? ಇವರು ತಮ್ಮ ತಾತ್ಸಾರಬುದ್ಧಿಯಿಂದ ಲಕ್ಷ್ಮಣನನ್ನು ಕಂಡದ್ದರಿಂದಲೇ ಅವಳ ಮನಸ್ಸಿನಲ್ಲಿ ಪ್ರೇಮ ಉದ್ಭವಿಸಿದೆ. ತೀರ ಸ್ವಾಭಾವಿಕ ಅದು. ಇವರೇ ಬಿತ್ತಿದ ಬೀಜ. ಇವರೇ ಒಬ್ಬರ ನ್ಯಾಯವಾದ ಪ್ರೀತಿಯನ್ನು ಕೆಡಿಸಲು ಹೋದರೆ ಅದು ಬಲವಾದೀತೆ.

ಅವನನ್ನು ಮಾತನಾಡಿಸುವುದಕ್ಕೂ ಧೈರ್ಯವಾಗಲಿಲ್ಲ. ಆದರೆ ಇನ್ನು ಖಂಡಿತ ಮಾಡಿದ್ದೇನೆ.

ಸದಾ—ಏನೆಂದು ?

ಶ್ರೀಮತಿ— ನಾಳೆ ನನಗೆ ಪ್ರಾಯ ಬಂದ ಮೇಲೆ, ಯಾರನ್ನೂ ಕೇಳುವುದಿಲ್ಲ. ಅವನನ್ನೇ ಲಗ್ನವಾಗುತ್ತೇನೆ. ಅವನೇ ಸಾಕು ನನಗೆ. ಶ್ರೀಮಂತರು ಬೇಡ.

ಸದಾ—ಮೊದಲಿನಿಂದಲೂ ಹಾಗೆ ಯೋಚನೆ ಮಾಡಿದ್ದೆಯಾ ?

ಶ್ರೀಮತಿ— ನೀನು ನಂಬಿದರೆ ನಂಬು, ಬಿಟ್ಟರೆ ಬಿಡು. ನಾನು ಮೊದಲು ಏನೂ ಯೋಚಿಸಿರಲಿಲ್ಲ. ಇವರೆಲ್ಲ ಅವನನ್ನು ಅಷ್ಟು ದ್ವೇಷಿಸುವದರಿಂದಲೇ ಅವನ ಮೇಲೆ ನನ್ನ ಕರುಣೆ ಹೆಚ್ಚಿತು. ಮೊದಲಿನಿಂದಲೂ ಅವನ ಮೇಲೆ ನನಗೆ ತುಂಬ ಅಭಿಮಾನ. ಈಗ ಮನಸ್ಸಿನಲ್ಲಿ ಅವನ ವಿಷಯವಾದ ಪ್ರೀತಿಯು ಅಂಕುರಿಸಿದೆ. ಲಗ್ನವಾಗುವುದಾದರೆ ಅವನನ್ನೇ ಆಗುತ್ತೇನೆ. ಇಲ್ಲವಾದರೆ ಬೇಡ. ಅವರೆಲ್ಲರು ಹೇಳಿದಂತೆಯೇ ಆಗಲಿ. ಹಾಗಾದರೆ ನಾನು ಒಬ್ಬಳೇ ಅಲ್ಲವೆ ? (ದುಃಖಿಸುವಳು).

ಸದಾ— ನೀನೇಕೆ ಅಳಬೇಕು ಶ್ರೀಮತಿ? ನಿನ್ನ ವಿಚಾರ ನನಗೆ ತಪ್ಪೆಂದು ಕಾಣುವುದಿಲ್ಲ. ಲಕ್ಷ್ಮಣನು ಯೋಗ್ಯ ಹುಡುಗ. ಅಪ್ಪನಿಗೆ ಮಾತ್ರ ಅವನ ಕುಲಗಿಲ ಸರಿಬೀಳದು. ಆದರೆ ಅವಸರ ಮಾಡದಿದ್ದಲ್ಲಿ ಅವರನ್ನೂ ಒಪ್ಪಿಸಬಹುದು. ಆದರೆ ಲಕ್ಷ್ಮಣನ ಮನಸ್ಸು ಏನೆಂದು ತಿಳಿಯಬೇಡವೆ ? ನೀನು ಅವನಿಗೇನಾದರೂ ಹೇಳಿದ್ದೀಯಾ ?

ಶ್ರೀಮತಿ— ತಿಳಿಸಬೇಕೆಂದಿದೆ. ಆದರೆ ಅವನು ಇಲ್ಲಿಗೆ ಬಂದರಲ್ಲವೆ ತಿಳಿಸುವುದು ? ಹಾಗೆ ಯಾರ ಮೂಲಕ ಹೇಳಿ ಕಳುಹಿಸಲಿಕ್ಕೂ ಉಪಾಯ ವಿಲ್ಲ. ಅಲ್ಲದೆ ಇಲ್ಲಿ ಏನಾದರೂ ಡಾಕ್ಟರ ಮನೆಗೆ ಸುದ್ದಿಯನ್ನು ಒಯ್ದು ಮುಟ್ಟಿಸುವವರಿದ್ದಾರೆ. ಆದರೆ ಅಣ್ಣಾ, ಈ ವಿಷಯ ಯಾರಲ್ಲಿಯೂ ಬೇಡ.

ಸದಾ— ನನ್ನ ಮೇಲೆ ನಿನಗೆ ಏಕೆ ಅವಿಶ್ವಾಸ ? ಪ್ರಸಂಗ ಬಂದರೆ ನಾನೇ ಲಕ್ಷ್ಮಣನಿಗೆ ಸೂಚಿಸುತ್ತೇನೆ. ನಮ್ಮ ಅಮ್ಮ ಅಪ್ಪನಿಗೆ ಬೇಡವಾದರೂ ನನಗೆ ತುಂಬ ಬೇಕಾದವ. ಅವನು ಬಡವನಾದರೆ ಏನಾಯಿತು ?

ಎಷ್ಟೋ ಜನ ಶ್ರೀಮಂತರ ಬುದ್ಧಿ ಭಿಕ್ಷುಕರಿಗಿಂತ ಕೇಡು. ಆದರೆ ಒಂದು ವಿಚಾರ. ಲಕ್ಷ್ಮಣನಿಗೆ ಈ ಸಂಗತಿ ತಿಳಿಯದೆ ಇದ್ದುದರಿಂದ ಆತ ಬೇರೆ ಯಾರಿಗಾದರೂ ಮಾತು ಕೊಟ್ಟರೆ ತುಂಬ ಕಷ್ಟವಲ್ಲವೇ ?

ಶ್ರೀಮತಿ—ಹೋಗಲಿ, ನನಗೆ ಅದೃಷ್ಟವಿಲ್ಲ ಎಂದು ತಿಳಿದರಾಯಿತು. ಅಣ್ಣ ಅಷ್ಟು ಅನ್ಯಾಯ ನುಡಿದುದಕ್ಕಾದರೂ ನನಗೆ ಲಗ್ನವಾಗಬೇಕೆಂಬಷ್ಟು ಹಟ. ನನ್ನ ಲಗ್ನಕ್ಕೆ ಅವನು ಬರಬೇಕಾಗಿಯೂ ಇಲ್ಲ. ಅವನು ನಮ್ಮನ್ನು ಕರೆದು ಊಟ ಹಾಕಬೇಕಾಗಿಯೂ ಇಲ್ಲ.

ಸದಾ—ಇವತ್ತು ಲಕ್ಷ್ಮಣ ಮನೆಗೆ ಬರುತ್ತಾನೆ ಗೊತ್ತೇ ನಿನಗೆ ?

ಶ್ರೀಮತಿ—ನಿಜವೇ ! ಬರುತ್ತಾನೆಯೋ ? ಬರಲಾರ. ಅಮ್ಮ ಹಾಗೆ ಮಾಡಿ ಇರಿಸಿದ್ದಾಳೆ.

ಸದಾ—ಇಷ್ಟು ಹೊತ್ತೆಲ್ಲಾ ಅಮ್ಮನ ಹತ್ತಿರ ತರ್ಕ ಮಾಡಿ ಅವಳನ್ನು ಒಪ್ಪಿಸಿಡೆನು. ಆಮೇಲೆ ಚಿದಾನಂದನನ್ನು ಕಳುಹಿಸಿದ್ದು

ಶ್ರೀಮತಿ—ಅಣ್ಣಾ, ಅಲ್ಲಿ ತಂದೆಯವರ ಹತ್ತಿರ ಮಾತನಾಡಲು ಬಂದದ್ದು ಯಾರೆಂದು ಗೊತ್ತಿದೆಯೋ ?

ಸದಾ—ಯಾರೊ ಕಕ್ಷಿಗಾರರಿರಬೇಕು.

ಶ್ರೀಮತಿ—ಕಕ್ಷಿಗಾರರಲ್ಲ. ಅವರು ಈ ಒಂದೆರಡು ತಿಂಗಳಿನಲ್ಲಿ ಎಂಟು, ಒಂಭತ್ತು ಸಾರಿ ಬಂದು ಹೋದರು. ನಿನ್ನೆ ಶಿಖಾರಿಗೆ ಬಂದವರು ಅವರು.

ಸದಾ—ಹಾಗೋ. ತುಂಬ ಪಿಸಿಪಿಸಿ ಗುಟ್ಟು ಮಾತನಾಡುವುದು ಕಾಣುತ್ತದೆ. ( ಬಂದರೆಂದು ಕಾಣುತ್ತದೆ. ನೀನು ಒಳಗೆ ಹೋಗು. )

( ಶ್ರೀಮತಿ ತೆರಳುವಳು. )

ಪಾಪ ! ಲಕ್ಷ್ಮಣನ ಹೆಸರನ್ನು ಕೇಳಿದರೆ ಶ್ರೀಮತಿಯ ಮುಖ ಹೂವಿನಂತೆ ಅರಳುತ್ತದೆ. ಅವಳಿಗೇನು ಗೊತ್ತಿದೆ, ಹಣದಿಂದ ಅಳೆಯುವ ಸ್ವಾಭಿಮಾನದ ವಿಚಾರಗಳು ? ಇವರು ತಮ್ಮ ತಾತ್ಕಾರ ಬುದ್ಧಿಯಿಂದ ಲಕ್ಷ್ಮಣನನ್ನು ಕಂಡದ್ದರಿಂದಲೇ ಅವಳ ಮನಸ್ಸಿನಲ್ಲಿ ಪ್ರೇಮ ಉದ್ಭವಿಸಿದೆ. ತೀರ ಸ್ವಾಭಾವಿಕ ಅದು. ಇವರೇ ಬಿತ್ತಿದ ಬೀಜ. ಇವರೇ ಒಬ್ಬರ ನ್ಯಾಯವಾದ ಪ್ರೀತಿಯನ್ನು ಕೆಡಿಸಲು ಹೋದರೆ ಅದು ಬಲವಾದೀತೆ

ಹೊರತು ನೊಂದುವಂತಿಲ್ಲ. ಇನ್ನು ಪ್ರತಿಯೊಬ್ಬರೂ ತಲೆ ತಲೆ ಚಚ್ಚಿಕೊಂಡರಾಯಿತು. ಆದರೆ ಈಗಲೆ ಏನಾದರೂ ಅಪ್ಪ ಅಮ್ಮನಿಗೆ ಸಂಗತಿ ಹೇಳುವ ಹಾಗಿದೆಯೋ? ಒಂದಕ್ಕೆ ನಾಲ್ಕಾದೀತು. ಅಂತು ಲಕ್ಷ್ಮಣನನ್ನು ಬರಹೇಳಿದ್ದು ಒಳ್ಳೆಯದೇ ಆಯಿತು.

( ಶಂಕರರಾವ ಮತ್ತು ಅವರ ಸ್ನೇಹಿತ ಮೋಹನರಾವ್ ಇಬ್ಬರೂ ಬರುವರು. )

ಶಂಕರ—ಸದಾಶಿವ, ಇವರು ಯಾರೆಂದು ಗೊತ್ತಾಯಿತೇ? ಇವರು ನಮ್ಮ ಕಾರ್ಕಳದ ಮೋಹನರಾಯರು—ರಿಟಾಯರ್ಡ ಎಂಜನಿಯರು. ಬಹಳ ವರ್ಷ ಕಾಲ ತೆಲುಗು ಜಿಲ್ಲೆಯಲ್ಲಿ ಕೆಲಸ ಮಾಡಿಕೊಂಡಿದ್ದರು. ಬನ್ನಿ ಮೋಹನರಾವ್, ಇವನೇ ನನ್ನ ಎರಡನೆಯ ಹುಡುಗ ಸದಾಶಿವ. ಬಿ. ಯುಸ್ ಸಿ. ಯಲ್ಲಿ ಫಸ್ಟ್ ಕ್ಲಾಸಾಗಿದ್ದಾನೆ. ಮುಂದೆ ಯಾವದಾದರೂ ಟೆಕ್ನಿಕಲ್ ಎಜ್ಯುಕೇಶನಿಗೆ ಹೋಗಬೇಕೆಂದಿದ್ದಾನೆ. ನೀವೇನನ್ನುತ್ತೀರಿ? ಯಾವ ಲ್ಯಾನ್ ಹಿಡಿದರೆ ಚೆನ್ನಾಗಿರುತ್ತದೆ?

ಮೋಹನರಾವ್ — ( ಅವರೊಡನೆ ಕರಲಾಘವ ಮಾಡಿ ಕೂತುಕೊಂಡು ) ಅವನ ಇಚ್ಛೆ ಮನಸ್ಸು ಹೇಗಿದೆಯೋ. ಆದರೆ ಈಗ ಸುಲಭವಾಗಿ ಉದ್ಯೋಗ ಸಿಗುವ ಕಾಲ. ಯುದ್ಧದ ಸಮಯ ಅಲ್ಲವೇ? ಏನೇನೂ ಯೋಗ್ಯತೆ ಇಲ್ಲದವರು ಸಹ ಒಳ್ಳೆ ಒಳ್ಳೆಯ ಚಾಕರಿ ಗಳಿಸಿಕೊಂಡಿದ್ದಾರೆ.

ಶಂಕರರಾವ್—ಅವನಿಗೆ ಇಷ್ಟು ಬೇಗ ನೌಕರಿ ಸೇರುವ ಇಚ್ಛೆ ಇಲ್ಲ. ಬರಿಯ ಬಿ. ಯುಸ್ ಸಿ.ಗೆ ಅಷ್ಟೊಂದು ಭವಿಷ್ಯ ಚೆನ್ನಾಗಿಲ್ಲವೆಂದು ತಿಳಿದಿದ್ದಾನೆ. ಒಂದು ಯುಮ್. ಯಸ್ ಸಿ. ಇಲ್ಲವೆ ಎಲೆಕಟ್ರಿಕಲ್ ಎಂಜನಿಯರ ಓದಬೇಕೆಂತೆ. ಇನ್ನು ನಾಲ್ಕೈದು ವರ್ಷದ ಶಿಕ್ಷಣವೆಂದರೆ ಇವನ ವಿದ್ಯೆಗೆ ಹಣ ಪೂರೈಸುವುದು ಕಷ್ಟವೇ ಸರಿ!

ಮೋಹನ— ವಿದ್ಯೆ ಮುಂದುವರಿಸುವುದೇನೊ ಒಳ್ಳೆಯದೆ. ಆದರೆ ಉದ್ಯೋಗದ ವಿಚಾರ ನೋಡಹೋದರೆ ಇವತ್ತಿರುವಷ್ಟು ಅನುಕೂಲ ಇನ್ನು ಐದು ವರ್ಷದ ನಂತರ ಇರುತ್ತದೆಯೋ ಎಂದು ಹೇಳಲಿಕ್ಕೆ ಬರುವುದಿಲ್ಲ. ಬದಲು ಯಾವುದಾದರೂ ಒಂದು ಸರ್ವಿಸ ಸೇರಿ ಅಲ್ಲಿಂದ ಸ್ಟೈಪೆಂಡ್ ದೊರಕಿಸಿಕೊಂಡು ಮುಂದಿನ ವಿದ್ಯಾಭ್ಯಾಸ ದೊರಕಿಸಿಕೊಳ್ಳುವುದು ಒಳ್ಳೆಯದಲ್ಲವೆ? ಹಾಗೆ ಬೇಕಾದರೆ ನನ್ನ ತಮ್ಮ ಇದ್ದಾನೆ.

ಅವನಿಂದೇನಾದರೂ ಇವನಿಗೆ ಸಹಾಯ ಸಿಗುವ ಹಾಗೆ ಮಾಡುವ.

ಶಂಕರ—ಅವರು ಎಲ್ಲಿದ್ದಾರೆ ಅಂದಿರಿ ? ಏನು ಮಾಡುತ್ತಿದ್ದಾರೆ ?

ಮೋಹನ್—ನ್ಯೂ ಡಿಲ್ಲಿಯಲ್ಲಿ. ಇನ್ನು ಕೆಲವು ದಿವಸಗಳಲ್ಲೆ ಸಪ್ಲೈ ಡಿಪಾರ್ಟಮೆಂಟಿನ ಚೀಫ್ ಹೆಡ್‌ಮೆಸ್ಟ್ರರ್ ಆಗುವ ಸಂಭವವಿದೆ. ಈಗ ಏನೋ ಡೆಪ್ಟಿ ಡೈರೆಕ್ಟರನಾಗಿದ್ದಾನೆ. ಒಳ್ಳೇ ಸಂಬಳ ಇದೆ. ತುಂಬ ವರ್ಚಸ್ಸಿದೆ. ಡಿಲ್ಲಿಯಲ್ಲೇ ಒಂದು ಮನೆ ತೆಗೆದುಕೊಂಡಿದ್ದಾನೆ ಸ್ವಂತಕ್ಕೆ.

ಶಂಕರ—ಅಷ್ಟೆಲ್ಲ ಇದ್ದೂ, ನಿಮ್ಮ ಹುಡುಗಿಗೆ ನೆಂಟಸ್ತಿಕೆ ನೋಡುವುದು ಕಷ್ಟವೆನ್ನುತ್ತೀರಾ ?

ಮೋಹನ್—ಬರಿಯ ನನ್ನ ಮಕ್ಕಳು ಮಾತ್ರವೇ ಇರುವುದು ? ಅವನಿಗೂ ನಾಲ್ಕು ಮಂದಿ ಹೆಣ್ಣು ಮಕ್ಕಳು. ಅಲ್ಲದೆ ನ್ಯೂ ಡಿಲ್ಲಿಯಲ್ಲಿ ಕುಳಿತು ಏನು ಮಾಡಲಿಕ್ಕೆ ಬರುತ್ತದೆ ? ಅಳಿಯನ ಶೋಧನೆ ಆಗಬೇಕಾದರೆ ಮುಂಬಯಿಗೆ ಬರಬೇಕು ಜಾತಕ, ಫೋಟೋ ಅಲ್ಲಿಗೆ ಕಳುಹಿಸಿದ್ದೇನೆ. ಅಲ್ಲದೆ ನನ್ನ ಮಗಳೇ ಎಲ್ಲದಕ್ಕೂ ಹಿರಿಯವಳು. ಅಷ್ಟೆ ಅಲ್ಲ ನಾನು ನಿಮ್ಮ ಹತ್ತಿರ ಪ್ರಸ್ತಾಪ ತೆಗೆದ ಮೇಲೆ ಅದು ಏನಾಗುತ್ತದೆ ಎಂದು ನೋಡಿಕೊಂಡೇ ಬೇರೆ ಮಾತನಾಡಬೇಕೇ ಹೊರತು, ಒಮ್ಮೆಗೆ ನಾಲ್ಕು ಜನರನ್ನು ಮಾತನಾಡಿಸುವುದು ಸಮನಲ್ಲ. ಸದಾಶಿವ ? ನಾವು ಮಾತನಾಡುವುದು ಏನಂತ ಗೊತ್ತಾಯಿತಲ್ಲಾ ?

ಶಂಕರ—ಆತ ಯಾವುದಕ್ಕೂ ಸದ್ಯ ಲಗ್ನ ಬೇಡ ಅನ್ನುತ್ತಾನೆ. ಜೀವನಕ್ಕೆ ಒಂದು ಸ್ಥಿರತೆ ಕಂಡ ಹೊರತು ಲಗ್ನ ಆಗುವ ಇಷ್ಟ ಅವನಿಗೆ ಇಲ್ಲ. ಆದರೂ ವಿಚಾರ ಮಾಡು ಅಂದಿದ್ದೇನೆ.

ಮೋಹನ—ನಾನು ಅಂದದ್ದು ಮತ್ತೇನು ? ಉದ್ಯೋಗ ಸಿಕ್ಕುವುದು ಈಗಿನ ದಿವಸದಲ್ಲಿ ಸುಲಭ. ನನ್ನ ತಮ್ಮನಿಗೆ ಕಾಗದ ಬರೆದರೆ ಏನೂ ಮಾಡಿಯಾನು. ಅವನ ಕೈಕೆಳಗೆ ದೊಡ್ಡ ದೊಡ್ಡ ಇಲಾಖೆಗಳಿವೆ. ನಾನು ಇವತ್ತೇ ಬೇಕಾದರೆ ಬರೆಯುತ್ತೇನೆ.

ಸದಾ—ನೀವು ಹಾಗೆ ಒಮ್ಮೆಲೆ ಏನೂ ಮುಂದುವರಿಸಬೇಡಿ. ನಾನು ವಿದ್ಯೆ ಮುಂದುವರಿಸಬೇಕೆ, ಬೇಡವೇ ಎಂಬುದನ್ನು ನಿರ್ಧರಿಸಲಿಲ್ಲ.

ಅದು ಮಾಡಿಕೊಂಡ ಮೇಲೆ ನೌಕರಿ ವಿಚಾರ. ಅಲ್ಲದೆ ನಮಗೆ ನಮ್ಮ ಶ್ರೀಮತಿಯ ಲಗ್ನವಾಗುವುದು ಅಷ್ಟೇ ಮುಖ್ಯ.

ಮೋಹನ—ನೀನು ಥಟ್ಟನೆ ಉತ್ತರ ಹೇಳಬೇಕೆಂದು ನನ್ನ ಅಪೇಕ್ಷೆ ಅಲ್ಲ. ನಮ್ಮ ಮನೆಯ ವರೆಗೆ ಬಂದು ಹುಡುಗಿಯನ್ನು ನೋಡಿ ಹೋಗು. ಬೇಕಾದರೆ ಮೊದಲೆ ಹುಡುಗಿಯ ಫೋಟೋ ಕಳುಹಿಸುತ್ತೇನೆ. ಲಗ್ನದ ವಿಚಾರಕ್ಕೆಂದೇ ತಿಳಿದು ಬರಬೇಕಾಗಿಲ್ಲ. ರಜೆ ಅಲ್ಲವೆ? ತಿರುಗಾಡಿಕೊಂಡು ಬಾ. ನಿನ್ನ ಮನಸ್ಸಿಗೆ ಒಪ್ಪಿದರೆ, ಎಲ್ಲಾ ಸರಿ ಎಂದು ಕಂಡರೆ, ಆಗಲಿ. ಇಲ್ಲವಾದರೆ ಬೇಡ. ಶಂಕರರಾವ, ಹೊತ್ತಾಯಿತು ಹೋಗಲೇ?

ಸದಾಶಿವ—ಗುಡಿವಿನಿಂಗ್.

ಮೋಹನ—ಹೋಗಿ ಬರುತ್ತೇನೆ ಸದಾಶಿವ. ನಾನು ಎಂದದ್ದನ್ನು ವಿಚಾರ ಮಾಡುತ್ತೀಯಲ್ಲಾ?

ಸದಾಶಿವ—ಮಾಡುತ್ತೇನೆ. ಆದರೆ ತಾವು ಇದನ್ನೇ ನಂಬಿ ಬೇರೆ ಪ್ರಯತ್ನಗಳನ್ನು ನಿಲ್ಲಿಸಬಾರದು. ನನ್ನ ನಿರ್ಧಾರ ಆಗುವುದಕ್ಕೆ ಎಷ್ಟು ಸಮಯ ಬೇಕೊ ತಿಳಿಯದು. ಅದಕ್ಕಾಗಿ ಕಾದು, ನಿಮಗೂ ತೊಂದರೆ ಯಾಗಬಾರದಲ್ಲಾ?

ಮೋಹನ—ನನಗೆ ತೊಂದರೆಯಾದರೂ ಚಿಂತೆ ಇಲ್ಲ. ಆದರೆ ಒಂದೇ ಸಾರಿಗೆ ಹತ್ತು ಸಂಬಂಧ ನೋಡುವ ಮನಸ್ಸಿಲ್ಲ ನನಗೆ. ಯಾವುದಾದರೂ ಒಂದನ್ನು ಮುಗಿಸಿ ಇನ್ನೊಂದನ್ನು ನೋಡಬೇಕು. ಹಾಗೆಯೇ ಅವಸರ ಮಾಡಿ ಹೇಗಾದರೂ ಮಾಡಿ ಮಗಳನ್ನು ದಾಟಿಸುವ ಯೋಚನೆ ನನಗಿಲ್ಲ. ನಿನ್ನ ಅಪ್ಪನೂ ನಾನೂ ಬಹು ಹಿಂದಿನಿಂದ ದೋಸ್ತಿಗಳು. ಆದ್ದರಿಂದಲೇ ಸ್ನೇಹ ಸಂಬಂಧವಾಗಲೀ ಎಂಬ ಆಸೆ. ನಾವೆಲ್ಲ ಹಳೆಯ ಕಾಲದ ವ್ಯಕ್ತಿಗಳು. ನೀವು ಆಧುನಿಕರು. ನಮ್ಮ ಕಾಲದಲ್ಲಿ ಲಗ್ನಕ್ಕೆ ಜೋಯಿಸ ಎಂಬುದು ಇಲ್ಲ. ನಮ್ಮ ಹಿರಿಯರು ಕನ್ಯೆ ನಿಶ್ಚಯ ಮಾಡಿದರು. ನಾವು ಆಯಿತೆಂದೆವು. ಆದರೆ ಆ ಕಾಲವು ಹೋಯಿತು ಅನ್ನಿ.

ಸದಾ—ಒಳ್ಳೆಯದಕ್ಕೆ.

ಮೋಹನ—ಸಮನೆ ನೀವು ತರುಣರು. ಹೊಸ ಯುಗದ ಕಣ್ಣು. ಚೇಷ್ಟೆ ಮಾಡುವುದು ಸಹಜ. ಆದರೆ ನೋಡು, ನಾಲ್ಕು ಮಂದಿ ಮಕ್ಕ

ಳಾದರೆ ನಿಮ್ಮ ಹೊಸ ಕಾಲವು ಹಳೆಯದಾಗುತ್ತದೆ. ಅಳಿಯನನ್ನು ಹುಡುಕಿ ಓಡಾಡುವ ಕಾಲ ಆಗಲೂ ಇದ್ದೇ ಇದೆ.

ಸದಾ— ಅದಕ್ಕೇ ಅಲ್ಲವೇ ಆ ದುರ್ದಿನವನ್ನು ಆದಷ್ಟು ಮುಂದಕ್ಕೆ ತಳ್ಳಲು ಪ್ರಯತ್ನ ಮಾಡುವುದು?

ಮೋಹನ— ಮಾತಿನಲ್ಲಿ ತುಂಬ ಜಾಣರಪ್ಪ ನೀವು. ಆಗಲಿ ಹೋಗಿ ಬರುತ್ತೇನೆ ( ತೆರಳುವನು ).

ಶಂಕರ— ನಿನಗೆ ಗೊತ್ತಿಲ್ಲ ಸದಾ. ಬಹಳ ಒಳ್ಳೆಯ ಮನುಷ್ಯ ಆತ. ನನಗೂ ಅವರಿಗೂ ಬಹು ಹಿಂದಿನ ಸ್ನೇಹ. ಆತನಿಗೆ ಅನುಕೂಲವೂ ಚೆನ್ನಾಗಿದೆ. ನಾಲ್ಕ್ನೂರು ರೂಪಾಯಿ ಪೆನ್‌ಶನ್ ಸಿಗುತ್ತಾ ಇದೆ. ಆಸ್ತಿ ಇದೆ. ಹಣ ಇದೆ. ನೀನು ಈ ಸಂಬಂಧಕ್ಕೆ ಒಪ್ಪಿದರೆ ವಿದ್ಯೆಗೂ ಕೊಟ್ಟಾರು, ವರದಕ್ಷಿಣೆಯನ್ನೂ ಕೊಟ್ಟಾರು. ನೋಡಿದೆಯಲ್ಲಾ ನೀನು. ಅವರಂಥ ವರೇ ಅಳಿಯನ ಭಿಕ್ಷೆಗೆ ಹೊರಡಬೇಕಾಗಿ ಬಂದರೆ ನಮ್ಮಂಥವರ ಪಾಡೇನು? ಆ ದಿನ ಶ್ರೀಮತಿ ಒಪ್ಪಿದರೆ ಎಲ್ಲ ಆಗಿ ಹೋಗುತ್ತಿತ್ತು.

ಸದಾ—ಅಪ್ಪಾ ಯಾಕೆ ನೀನು ಅವಳ ಲಗ್ನದ ಅವಸರದಲ್ಲಿದ್ದೀಯೊ ನನಗೆ ತಿಳಿಯದು.

ಶಂಕರ— ಮಗೂ, ಗಂಡುಮಕ್ಕಳಿಗೂ, ಹೆಣ್ಣುಮಕ್ಕಳಿಗೂ ಅಂತರವೇ ಇಲ್ಲವೆ? ಈ ಹೊತ್ತಿನ ದಿನ ನಮ್ಮ ಜಾತಿಯಲ್ಲಿ ಗಂಡು Asset. ಹೆಣ್ಣು liablity.

ಸದಾ— ಆ ದಿನ ತನ್ನಂತೆ ಹೋಗುತ್ತದೆ. ಹೆಣ್ಣುಮಕ್ಕಳಿಗೆ ಒಂದಿಷ್ಟು ವಿದ್ಯೆ ಕೊಟ್ಟು ಸ್ವತಂತ್ರ ಉದ್ಯೋಗಕ್ಕೆ ಹಾಕಿದರೆ ಅವರೇ ತಂತಮ್ಮ ಗಂಡಂದಿರನ್ನು ಆರಿಸುತ್ತಾರೆ. ತಂದೆ ತಾಯಿಯರು ವರ ಬೇಡಿಕೊಂಡು ಹೋಗಬೇಕಾಗಿಲ್ಲ. ಅದಕ್ಕೇನೆ ನಾನು ಶ್ರೀಮತಿಯ ವಿದ್ಯೆ ಮುಂದು ವರಿಸಬೇಕೆಂದು ಹೇಳಿದ್ದು.

ಶಂಕರ— ಶ್ರೀಮತಿ ಓದಿ ನಾಳೆ ಉದ್ಯೋಗ ಹುಡುಕಿಕೊಂಡು ಜೀವನ ಸಂಪಾದಿಸಬೇಕೆ? ಆಗ ಆಗುವ ಲಗ್ನವೆಂದರೆ ಅಂತರ ಜಾತಿಯ

ಲಗ್ನ. ನೀವೆನ್ನುವ love marriage. ಜಾತಿ ನೀತಿ ಯಾವುದೂ ಇಲ್ಲ.

ಸದಾ—ಅಪ್ಪಾ, ನೀನು ಮೆಚ್ಚುವ ಹಳೆ ಸಂಪ್ರದಾಯವೆಲ್ಲ ಶಾಶ್ವತ ಎಂದು ತಿಳಿದಿದ್ದೀಯಾ? ಆ ಗೊಡ್ಡು ಸಾಂಪ್ರದಾಯವೆಲ್ಲ ಒಂದೊಂದಾಗಿ ಹೊರಟು ಹೋಯಿತು.

ಶಂಕರ— ನಿನ್ನ ತಲೆಯಲ್ಲಿ ಸಾವಿರ ಹುಚ್ಚು ಸುಧಾರಣೆಗಳು ತುಂಬಿವೆ. ಕೊನೆಗೊಂದು ದಿವಸ ನೀನೂ ಹಾಗೆ ಮಾಡುತ್ತೀಯಾ ಎಂಬ ಹೆದರಿಕೆ. ಅದಕ್ಕೇ ಇರಬಹುದು ಮದುವೆ ಮುಂದುವರಿಸುವ ಮಾತು. ಆದರೆ ನಮ್ಮ ಜವಾಬ್ದಾರಿ ಇರುವಷ್ಟು ದಿನ ನಾವು ಅದನ್ನು ನಿರ್ವಹಿಸಬೇಕಲ್ಲ? ನಮ್ಮ ಕಣ್ಣು ಮುಂದೆಯೇ ಏನಾದರೂ ಅನರ್ಥವಾಗದ ಹಾಗೆ ನೋಡಿಕೊಂಡಿರಬೇಕಲ್ಲಾ?

(ಆಗ ಲಕ್ಷ್ಮಣ ಮತ್ತು ಚಿದಾನಂದ ಪ್ರವೇಶಿಸುತ್ತಾರೆ.)

ಯಾರು ಲಕ್ಷ್ಮಣನೇ? ನೀನು ಮನೆಗೆ ಬಾರದೆ ಒಂದು ಯುಗವಾಯಿತಲ!

ಲಕ್ಷ್ಮಣ—ನಮಸ್ಕಾರ ರಾಯರೇ!

ಚಿದಾ—ಅಣ್ಣಾ, ಇವನನ್ನು ಎಳೆದು ತಂದ ಹಾಗೆ ತರಬೇಕಾಯಿತು. ಬರುವುದಿಲ್ಲವೆಂದು ಗಟ್ಟಿಯಾಗಿ ಕುಳಿತಿದ್ದ.

ಶಂಕರ—ಯಾರು ಲಕ್ಷ್ಮಣನೇ? ಏನು ಲಕ್ಷ್ಮಣ ಇದೂ, ನಮ್ಮ ಮನೆಯು ಗುರುತೇ ಮರೆತು ಹೋಯಿತಲ್ಲ ನಿನಗೆ! ಊರಿಗೆ ಎರಡು ಮೂರಾವರ್ತಿ ಬಂದಿದ್ದೀಯಂತೆ. ಒಂದು ಸಾರಿಯಾದರೂ ಈ ಕಡೆಗೆ ಹಾಯಬಾರದೇ?

ಲಕ್ಷ್ಮಣ— ಅವಕಾಶವಾಗಲಿಲ್ಲ. ನನ್ನ ಅಪ್ಪ ಈ ವಯಸ್ಸಿನಲ್ಲಿ ಒಂದು ಮದ್ದಿನ ಅಂಗಡಿ ತೆಗೆದಿದ್ದಾರಲ್ಲಾ? ಸುಮ್ಮನೆ ಎಲ್ಲೆಲ್ಲಿ ತಿರುಗಾಡುವುದೇಕೆ? ಸುಮ್ಮನೆ ಅಂಗಡಿಯಲ್ಲಿ ಕೂತುಕೊಳ್ಳಬಾರದೆ! ಎಂದರು. ಏನಾದರೂ ಒಂದು ಸಂಪಾದನೆಯ ದಾರಿ ಆಯಿತು. ನನ್ನಿಂದಾದ ಸಹಾಯ ಮಾಡುವ ಎಂದು ಅಂಗಡಿಯಲ್ಲೇ ಇರುತ್ತಿದ್ದೆನು.

ಶಂಕರ—ಯಾಕೆ ನೀನು ಉಂಡ ಹಳೆಯ ಮನೆ; ಅಷ್ಟು ಕಾಲ ಇದ್ದದ್ದು, ಎಂಬುದನ್ನಾದರೂ ನೆನಪಿಗೆ ತರಬಾರದೇ ?

ಲಕ್ಷ್ಮಣ—ಆ ನೆನಪು ಹೋದೀತೆ? ನೀವು ಕರೆಯಿಸಿಕೊಂಡಾಗ ಬರಬೇಕೆಂಬುದೇ ನನ್ನ ಇಷ್ಟ.

ಶಂಕರ—ಓಹೋ, ನಾನು ಕರೆಯಿಸಬೇಕು, ನೀನು ಬರಬೇಕೂ ಅಂತ ಇದ್ದೀಯ ?

ಸದಾ—ಅಪ್ಪಾ, ಯಾಕೆ ಸುಮ್ಮನೆ ಜಗಳದ ದಾರಿ ಕಾಯುತ್ತೀ ?

ಶಂಕರ—ಜಗಳ ಎಲ್ಲಿ ಬಂತು? ಹೇಷ್ಟೆಗೆ ಅಂದದ್ದಲ್ಲವೇ? ಲಕ್ಷ್ಮಣನ ಹತ್ತಿರ ಜಗಳವೇ ?........ನೀವು ಮಾತಾಡುತ್ತ ಇರಿ. ನಾನು ಇನ್ನೂ ರಿಕಾರ್ಡು ಫೈಲ್ ನೋಡಲಿಲ್ಲ. ಊಟಕ್ಕೆ ಏಳುವಾಗ ಕರೆದು ಬಿಡಿ. (ತೆರಳುವನು.)

ಸದಾ— ಏನಯ್ಯಾ, ಬರುತ್ತೇನಂದ ಮೇಲೆಯೂ ಇಷ್ಟು ಮರಾತ ಹಿಡಿಯಬೇಕಾಯಿತೇ? ಹಳೆಯದನ್ನೆಲ್ಲ ಮರೆತು ಬಿಡು. ನೀನು ಬರುತ್ತೀ ಎನ್ನುವುದನ್ನು ಕೇಳಿ ಶ್ರೀಮತಿಗೆ ತುಂಬ ಸಂತೋಷವಾಯಿತು. ಶ್ರೀ ಇಲ್ಲಿ ಬಾರೇ. ಯಾರೊ ಹೊಸ ಅತಿಥಿಗಳು ಬಂದಿದ್ದಾರೆ.

(ಶ್ರೀಮತಿ ಬರುವಳು.)

ಸದಾ—ಹೂಂ, ಬಾ, ಬಾ ದಾಕ್ಷಿಣ್ಯ ಏನು? ಈಗ ನಮ್ಮ ಶ್ರೀಮತಿ ಲಜ್ಜಾವತಿ ಆಗಿಬಿಟ್ಟಿದ್ದಾಳೆ.

ಲಕ್ಷ್ಮಣ—ಯಾರು ಶ್ರೀಯೇ, ನನಗೇನು ಕಾಣಿಸುವುದಿಲ್ಲ. ನಾನು ನೋಡದೆ ಒಂದು ವರ್ಷವಾದರೂ ಹಾಗೆಯೇ ಇದ್ದಾಳೆ. ತುಸು ಉದ್ದವಾಗಿರಬೇಕು.

ಸದಾ—ಲಜ್ಜೆಯೆಂದರೆ ಗಿಡ್ಡವಾಗುತ್ತಾರೆ ಎಂದೆನೆ ?

ಲಕ್ಷ್ಮಣ—ಅವಳೇಕೆ ಲಜ್ಜೆ ಪಡಬೇಕು? ಏನು ಶ್ರೀ, ಹೇಗೆದ್ದೀಯ? ಕಾಲೇಜು ಸೇರಿದ್ದೀಯಾ?

ಶ್ರೀ—(ಮೆಲ್ಲಗೆ) ಇಲ್ಲ.

ಸದಾ—ಏನೇ, ಮಾತನಾಡು, ಕಿವಿ ಇಲ್ಲವೇ? ಕಾಲೇಜಿಗೆ ಹೋಗು ತ್ತೀಯಾ ಎಂದು ಕೇಳಿದ. ಅದನ್ನು ಇಂಗ್ಲಿಷಿನಲ್ಲಿ ಭಾಷಾಂತರ ಮಾಡಿ ಹೇಳಬೇಕೆ?

ಶ್ರೀಮತಿ— ನೀನೇ ಅನ್ನಬಾರದೇ? ನಿನಗೆ ಗೊತ್ತಿಲ್ಲವೇ? ಅವನಿಗೆ ಗೊತ್ತಿಲ್ಲದೆ ಇರಬಹುದು. ನಾನು ಮನೆಯಲ್ಲಿ—ಮೂಗಿಲಿಯಾಗಿದ್ದೇ ನೆಂದು.

ಸದಾ—ನೀನು ಮೂಗಿಲಿಯೇ! ತಾಜಾ ಹೆಬ್ಬುಲಿ. ಬಾ ಕೂತುಕೊ.

ಶ್ರೀಮತಿ—ಲಕ್ಷ್ಮಣ, ತಮ್ಮ ಏನು ಮಾಡುತ್ತಿದ್ದಾನೆ ಈಗ?

ಲಕ್ಷ್ಮಣ—ಅವನು ಶಾಲೆ ಬಿಟ್ಟ ಶ್ರೀ. ಅಂದರೆ ತಂದೆ ಬಿಡಿಸಿದರು. 3rd form ಸಾಕೆಂದು ಬಿಡಿಸಿ, ಅಂಗಡಿಯಲ್ಲಿ ಕುಳ್ಳಿರಿಸಿದರು.

ಶ್ರೀಮತಿ—ನಿಮ್ಮದೊಂದು ಡ್ರಗ್ ಶೊಪ್ ಆಗಿದೆಯಂತೆ?

ಲಕ್ಷ್ಮಣ—ನಮ್ಮದೆಂದರೆ ನಮ್ಮದಲ್ಲ ನನ್ನ ತಂದೆಯದು. ಯಾರೋ ಸ್ನೇಹಿತರು ಸಹಾಯ ಮಾಡಿದ್ದಾರೆ. ಅಲ್ಲದೆ ಯುದ್ಧ ಸಮಯವಲ್ಲವೇ? ಏನು ಮಾರಿದರೂ ದುಡ್ಡು ಸಿಗುತ್ತದೆ. ಅಂತೂ ದೇವರ ದಯೆಯಿಂದ ತುಂಬ ಅನುಕೂಲವಾಗಿದೆ.

ಶ್ರೀಮತಿ—ಯಾರು ಹಣ ಕೊಟ್ಟು ಸಹಾಯ ಮಾಡಿದವರು? ನಿನಗೂ ಯೋಚನೆ ಕಡಿಮೆ ಆಯಿತಲ್ಲಾ? ಈಗ ನೀನು ಎಲ್ಲಿ ದ್ದಿಯಾ?

ಲಕ್ಷ್ಮಣ—ಇಂಥಲ್ಲಿ ಎಂದಿಲ್ಲ. ಮಿಲಿಟ್ರಿ ಟ್ರ್ಯನಿಂಗಿಗೆ ಅಲ್ಲವೇ. ಬೆಂಗಳೂರು, ಪೂನಾ, ಮುಂಬಯಿ, ಕಲ್ಕತ್ತ ಎಂದು ಒಂದೊಂದು ಸಾರಿ ಒಂದೊಂದು ಕಡೆ. ಸರ್ವಿಸ್ ಅಂದ ಮೇಲೆ ಎಲ್ಲಿಯಾದರೆ ಏನು?

ಸದಾ—ತಂದೆಗೆ ಸಂಪಾದನೆ ಚೆನ್ನಾಗಿದೆ ಅನ್ನುತ್ತೀಯಾ?

ಲಕ್ಷ್ಮಣ—ಮನೆಯ ಖರ್ಚಿಗೆ ಸಾಕು. ನಾನೂ ಸ್ವಲ್ಪ ಸ್ವಲ್ಪ ಹಣ ಕಳುಹಿಸುತ್ತಿದ್ದೇನೆ. ಅದನ್ನೂ ವ್ಯಾಪಾರಕ್ಕೆ ಹಾಕಿರಬೇಕು. ಅಂತೂ

ಇಷ್ಟು ಆಯುಷ್ಯ ಕಾಲ ಬೇಡಿ ಕಾಡಿ ಬದುಕಿದ್ದಕ್ಕೆ ಈಗಲಾದರೂ ಮುಪ್ಪಿನ ದಿನಕ್ಕೆ ಸ್ವತಂತ್ರವಾಗಿರುವ ಯೋಗ್ಯತೆ ಬಂದಿತು.

ಸದಾ—ಹೋಗಲಿ. ನಮ್ಮ ಶ್ರೀಮತಿಗೆ ನೀನು ಇಷ್ಟು ದಿನ ಯಾಕೆ ಈ ಮನೆಗೆ ಬರಲಿಲ್ಲ ಹೇಳು? ಅವಳ ವತ್ತಾಯಕ್ಕೆ ನಾನು ನಿನ್ನನು ಕರೆದು ತಂದದ್ದು.

ಶ್ರೀಮತಿ— ಅಣ್ಣ ಸುಳ್ಳು ಹೇಳುತ್ತೀಯಾ? ನಾನು ಅವನನು ಬರಲಿಕ್ಕೆ ಹೇಳಿದೇನೇ ನಿನ್ನ ಹತ್ತಿರ?

ಸದಾ—ಹಾಗಾದರೆ ಅವನೀಗ ಹೋಗಲೇ?

ಶ್ರೀಮತಿ—ಅದು ಕರೆದವನಿಗೇ ಗೊತ್ತು. ಈ ಮನೆಯಿಂದ ನಾನು ಯಾರನ್ನೂ ಹೋಗಿ ಎಂದು ಕಳುಹಿಸಲೂ ಇಲ್ಲ. ಕಳುಹಿಸಲಿಕ್ಕೂ ಇಲ್ಲ. ನನ್ನ ಮನೆಯಾ ಇದು?

ಸದಾ—ಮತ್ತೆ ಯಾರದ್ದು? ನಾವೆಲ್ಲ ಊರ ಹೊರಗಿರುವವರು.

ಶ್ರೀಮತಿ—ನೀವು ಇವತ್ತು ಊರ ಹೊರಗೆ ಆದರೆ ನಾನು ನಾಳೆ ಈ ಊರ ಹೊರಗೆ?

ಲಕ್ಷ್ಮಣ—ಯಾಕೆ ಅವಳನ್ನು ಕಾಡುತ್ತೀ ಸದಾ?

ಸದಾ—ಹೋ, ನಾನು ಮಾತನಾಡುವುದಿಲ್ಲ. ನೀನು ಅವಳ ವಕಾಲತ್ತನ್ನು ಹೇಳಿದ ಮೇಲೆ.

ವಸಂತಿ—(ಬಂದು ಬಾಗಿಲಲ್ಲೇ ನಿಂತು) ಸದಾ, ಅಡುಗೆ ಆಯಿತು. ಬಡಿಸಲೇ? ಶ್ರೀಮತಿ ಎಲ್ಲಿ? ಎಲೆಯನ್ನಾದರೂ ಹಾಕಬಾರದೇ?

ಸದಾ—ಹೋಗು ಶ್ರೀ. ಮತ್ತೆ ನಿನ್ನ ಅಮ್ಮ ಏನಾದರೂ ತಿಳಿದಾರು!

ಲಕ್ಷ್ಮಣ — ನೀನು ಸದಾ, ಇಲ್ಲದ ಪಿಕಲಾಟದವನು. ನಿನ್ನ ತಾಯಿಗೆ ನಾನು ಬರುವುದು ಇಷ್ಟ ಇಲ್ಲದೆ ಇದ್ದೂ....

ಸದಾ— ಏನಾಯಿತ್ತಂತೆ? ಅವರವರ ಇಷ್ಟದವರು ಮಾತ್ರ ಈ

ಮನೆಗೆ ಬರುತ್ತಿರುವುದೇ? ನಮ್ಮ ಇಷ್ಟದವರು ಬರುತ್ತಿರಬೇಡವೇ? ಶ್ರೀಮತಿ ಸಹ ನಿನ್ನನ್ನು ಕಾಣಬೇಕೆಂದು ಹಂಬಲಿಸಲಿಲ್ಲವೇ?

ಲಕ್ಷ್ಮಣ—ಅದು ಮಾತ್ರ ಹಕ್ಕು.

ಸದಾ—ಹಾಗಾದರೆ ನೀನು ಬಂದುದರಿಂದ ಅವಳಿಗೆ ಸಂತೋಷ ಇಲ್ಲ ಅನ್ನುತ್ತೀಯಾ?

ಲಕ್ಷ್ಮಣ— ಅವಳಿಗೆ ಈಗ ಸಂತೋಷವೂ ಆದೀತು. ಆಮೇಲೆ ಉಭಯ ಸಂಕಟವೂ ಆದೀತು.

ವಸಂತಿ—(ತಿರುಗಿ ಪ್ರವೇಶಿಸಿ) ಬಂದೆಯಾ ಲಕ್ಷ್ಮಣ?

ಲಕ್ಷ್ಮಣ—ನಮಸ್ಕಾರ ಅಮ್ಮಾ.

ವಸಂತಿ—ಊಟಕ್ಕೆ ಆಯಿತು ಏಳಿ.

ಸದಾ—ಅಪ್ಪಾ ಊಟಕ್ಕೆ ಆಯಿತಂತೆ.

ಶಂಕರ—(ಕಾಳಿತಲ್ಲಿಂದಲೇ) ನಾನೀಗ ಬರುತ್ತೇನೆ. ನೀವು ಊಟ ಮುಂದರಿಸಿ. ಸ್ವಲ್ಪ ಕೆಲಸವಿದೆ.

ಸದಾ—ಹೋಗುವ ಏಳು ಲಕ್ಷ್ಮಣ.

---

# ಮೂರನೆಯ ಅಂಕ

( ರಾಮರಾಯರ ಮನೆಯ ಒಂದು ಜಾವಡಿ. ಒಂದು ಕಡೆ ಡಿಸ್‌ಪೆನ್ಸರಿಗೆ ಹೋಗುವ ಹಾದಿ. ಇನ್ನೊಂದು ಕಡೆಗೆ ಅವರ ಮನೆಯೊಳಕ್ಕೆ ಹೋಗುವ ದಾರಿ. ಜಾವಡಿಯಲ್ಲಿ ಕುಳಿತುಕೊಳ್ಳುವುದಕ್ಕೆ ಆಸನಗಳಿವೆ. ಕೆಳಗಡೆ ಹೂಗಿಡಗಳಿವೆ. ಸುಧಾಕರ ಮತ್ತು ಸದಾಶಿವ ನಿಂತು ಮಾತನಾಡುತ್ತಿದ್ದಾರೆ. ಸಮಯ ಇನ್ನೊಂದು ವರ್ಷ ಕಳೆದ ಬಳಿಕ. )

ಸುಧಾ—ಏನು ಬಂದೆ ? ಏನು ಹೇಳಿ ಕಳುಹಿಸಿದ್ದು ?— ಒಂದೂ ತಿಳಿಯಲಿಲ್ಲವಲ್ಲಾ ?

ಸದಾ—ಹೌದು; ಅಪ್ಪ ಹತ್ತು ಸಾರಿ ನಿನ್ನನ್ನು ಮನೆಗೆ ಬರಲು ಹೇಳಿ ಕಳುಹಿಸಿದರು. ಒಂದು ಸಾರಿಯೂ ನೀನು ಮನೆಯ ಕಡೆಗೆ ಬರಲಿಲ್ಲ. ಈ ಕೆಲಸಕ್ಕೋಸ್ಕರ ತಂದೆಯವರು ತಂತಿ ಕೊಟ್ಟು ನನ್ನನ್ನು ಕರಯಿಸಿ ಕೊಂಡರು. ನಾನಾದರೂ ಬರಬೇಡವೇ ಈಗ ?

ಸುಧಾ—ಅಂಥ ಜರೂರ ಏನಂತೆ ?

ಸದಾ—ಅದು ನಿನಗೆ ಹೇಗೆ ತಿಳಿದೀತು, ಇಷ್ಟು ಸಮೀಪವಿದ್ದು ಅವರ ವಿಚಾರ ನೀನು ಮಾಡದೆ ಹೋದರೆ ?

ಸುಧಾ— ನಾನೇನು ಯೋಚಿಸಬೇಕು ? ಅವರು ಹೇಳಿ ಕಳುಹಿಸುವುದು ಒಂದೇ ಕಾರಣಕ್ಕೆ. ಪ್ರತಿ ಸಾರಿಯೂ ರೂಪಾಯಿ ಕೊಡು, ರೂಪಾಯಿ ಕೊಡು ಎನ್ನುವುದೇ ಅವರ ಮಾತು. ಪ್ರಾಯಶಃ ಅವರು ತಿಳಿದಿರಬೇಕು ಪ್ರ್ಯಾಕ್ಟಿಸ್ ಸುರುವುಮಾಡಿದ ಕೂಡಲೇ ಹಣ ಸುರಿಯುತ್ತದೆ ಎಂದು. ಅಲ್ಲದೆ ಧರ್ಮಾರ್ಥವಾಗಿ ಮಾವನ ಮನೆಯಲ್ಲಿದ್ದೇನೆ. ನನಗೆ ಯಾವ ಖರ್ಚೂ ಇಲ್ಲವೆಂದೂ. ಅವರವರ ತಾಪತ್ರಯ ಅವರವರಿಗೆ ಇದ್ದೇ ಇದೆ. ನಾವು ಒಟ್ಟಿಗೆ ಇದ್ದೇವೆ ಎಂದ ಮಾತ್ರಕ್ಕೆ ನನಗೆ ಏನೇನೂ ಖರ್ಚು ಇದ್ದಿರಲಿಕ್ಕಿಲ್ಲವೆಂದು ಅವರು ತಿಳಿದಿದ್ದಾರೋ ಏನೊ

ಸದಾ— ಹಾಗೆಂದರೆ ಏನಣ್ಣ? ಅವರ ಸ್ಥಿತಿ ಅಷ್ಟು ಕಂಗೆಟ್ಟಿರುವಾಗ ಮಕ್ಕಳಾದ ನಾವು ಏನೂ ಯೋಚಿಸುವ ಅಂಶ ಇಲ್ಲ ಎನ್ನುತ್ತೀಯು? ಕಳೆ ದಾವರ್ತಿ ಬಂದಾಗಲೇ ಹಣದ ಅಡಚಣೆಯುನ್ನು ಹೇಳಿ ಗೋಳಿಡುತ್ತಿದ್ದರು. ನನ್ನ ಮುಂದಿನ ವಿದ್ಯಾಭ್ಯಾಸಕ್ಕೆ ಹಣ ಕೊಡದಾಗದೂ ಎಂದರು.

ಸುಧಾ— ಏನಾಗಿದೆ ಅವರಿಗೆ? ವಕಾಲತಿಗೆ ತೊಂದರೆಯೇ, ಸಂಪಾದನೆಗೆ ತೊಂದರೆಯೇ?

ಸದಾ— ಎಲ್ಲಿದೆ ಅವರಿಗೆ ಮೊದಲನೆಯು ಸಂಪಾದನೆ? ಒಮ್ಮೆ ಆ ಸಂಪಾದನೆ ಇದೆ ಎಂದು ತಿಳಿದರೂ ಖರ್ಚಿನ ಅಂಶ ಒಂದಕ್ಕೆ ನಾಲ್ಕಾಗಿಲ್ಲವೇ? ನನಗೆ ಹಣ ಕಳುಹಿಸುವುದು ಬೇಡವಾದರೆ ಏನಾಯಿತು? ಚಿದಾ ಮತ್ತು ಶ್ರೀಮತಿಯುವರಿಗೆ ಕಾಲೇಜಿಗೆ ತೆರಬೇಡವೇ? ಮನೆಯು ಖರ್ಚಿಗೆ ಆಗಬೇಡವೇ? ಅಲ್ಲದೆ ನಿನ್ನ ಮದುವೆಗೆ ಮಾಡಿದ ಸಾಲ ಎರಡು ಸಾವಿರ ರೂಪಾಯಿ ಇನ್ನೂ ಬಾಕಿ ಇದೆ. ಸಾಲಗಾರರ ತಗಾದೆ ಜೋರಾಗಿದೆಯುಂತೆ. ಅದಲ್ಲದೆ ಅಂಗಡಿ ಸಾಲ, ಅರಿವೆ ಸಾಲವೆಂದು ಸಾವಿರ ರೂಪಾಯಿ ಆಗುತ್ತಂತೆ. ಏನಾದರೂ ಮಾಡು ಎಂದು ನನಗೆ ತಿಳಿಸಿದ್ದಾರೆ. ಅಷ್ಟು ತಾಪತ್ರಯು ಇಲ್ಲದೆ ಹೋದರೆ ನನಗೆ ತಂತಿ ಕೊಡುತ್ತಿದ್ದರೇ? ಏನೊ ನಾವಿಬ್ಬರೂ ದುಡಿಯುತ್ತಾ ಇದ್ದೇವೆ. ಅವರ ಕಷ್ಟವನ್ನು ನೋಡಿ ಸುಮ್ಮನೆ ಕೂತಿರುವುದಕ್ಕೆ ಒರುತ್ತುದೆಯೇ?

ನಾನು ಹಾಗೆಂದು ಮುಂದೆ ಓದಬೇಕಿದ್ದವ, ಎಲ್ಲ ಆಸೆಯುನ್ನೂ ಬದಿಗೊತ್ತಿ ಕೆಲಸಕ್ಕೆ ಸೇರಿಕೊಂಡೆ. ತಿಂಗಳಿಗೆ ಐವತ್ತು ರೂಪಾಯಿಯುಷ್ಟು ಚಿದಾನಂದನಿಗೆ ಕಳುಹಿಸುತ್ತಾ ಬಂದಿದ್ದೇನೆ. ಊರು, ಮನೆಯುಲ್ಲಿದ್ದ ನೀನು ಶ್ರೀಮತಿಯು ವಿದ್ಯೆಗಾದರೂ ಕೊಡಬಹುದಿತ್ತು. ಮನೆಯು ಸಾಲ ಇಬ್ಬರೂ ಸೇರಿ ಹಂಚಿಕೊಂಡು ಹೇಗಾದರೂ ತೀರಿಸುವ. ಅವರಿಗೆ ಈ ವಯುಸ್ಸಿನಲ್ಲಿ ಚಿಂತೆ ಕೊಡುವುದು ಸಮನಲ್ಲ. ಅವರಿಗೆ ಬರುವ ಮನಸ್ಸಿಲ್ಲದಿದ್ದರೂ ಬರುತ್ತೇನೆ ಎಂದಿದ್ದಾರೆ. ನಾನೇ ಏನಾದರೊಂದು ತೀರ್ಮಾನ ಮಾಡಿಕೊಂಡು ಅವರಿಗೆ ಹೇಳುವ. ನ್ಯಾಯುವಾಗಿ ನೀನೆ ಎಲ್ಲವನ್ನು ನೋಡಿ ಸುಧಾರಿಸಬೇಕಿತ್ತು.

ಸುಧಾ— ನನಗೆ ತರ್ಕವಿಜ್ಞಾನವೇ ಇಲ್ಲ, ನೀನು ಹೇಳಿ ಆಗಬೇಕು.

ತಂದೆಯವರು ಸಾಲ ಮಾಡಿದರೆ ಅದು ಮನೆಯಲ್ಲಿ ಕಂಡಾಬಟ್ಟೆ ದರ್ಬಾರು ಮಾಡಿ. ಆ ಹೊರೆಯನ್ನೆಲ್ಲ ನಾನು ಹೊರಲು ಸಾಧ್ಯವೇ? ನನ್ನ ಹೊರೆ ನನಗಿದೆ. ಈ ತಿಂಗಳ ಇನ್ಶೂರನ್ಸ್ ಪ್ರೀಮಿಯಮ್‌ನ್ನು ಮಾವನಿಂದ ತೆಗೆದುಕೊಂಡೆ. ಮನೆ ಖರ್ಚು ಅವರಿಗೆ ಮಾತ್ರ ದುಬಾರಿಯಲ್ಲ. ನಮ್ಮ ಉದ್ಯೋಗದ ಗೌರವ ಉಳಿಸಿಕೊಳ್ಳುವುದಕ್ಕೆ ಒಂದು ರೀತಿಯಿಂದ ಜೀವನ ಮಾಡಬೇಕು. ಎಷ್ಟು ದುಡಿದರೂ ಸಾಕಾಗುವುದಿಲ್ಲ. ಅಲ್ಲದೆ ಹೋದರೆ ಹಣದ ತಗಾದೆ ಇದೆ ಎಂದು ಗೊತ್ತಿದ್ದ ಕಾಲಕ್ಕೆ ಶ್ರೀಮತಿಗೆ ಇಂಟರ್ ಓದಲು ಹಾಕಿದ್ದೇಕೆ? ಯಾವಾಗಲೋ ಲಗ್ನ ಮಾಡಿಸಿ ಕುಳಿತಿರಬಹುದಿತ್ತಲ್ಲಾ? ನಾವು ಹೇಳಿದ್ದೊಂದೂ ಅವರಿಗೆ ಹಿಡಿಸುವುದಿಲ್ಲ. ಅವರ ಚಿಂತೆಗೆ ಮಾತ್ರ ನಾನು ತಲೆ ಹಾಕಬೇಕೂ ಅನ್ನುತ್ತಾರೆ.

ಸದಾ—ಶ್ರೀಮತಿಯನ್ನು ಅವರ ಇಚ್ಛೆಯಿಂದ ಕಾಲೇಜಿಗೆ ಕಳುಹಿಸಿದ್ದಲ್ಲ. ನನ್ನ ಒತ್ತಾಯಕ್ಕೆ ಅವಳನ್ನು ಕಳುಹಿಸಿದರು. ಅವಳು ಏನೂ ಇಲ್ಲದೆ ಮನೆಯಲ್ಲಿ ಕುಳಿತಿರುವುದೇತಕ್ಕೆ? ಅವಳಿಗೆ ಹದಿನಾರೇ ವರ್ಷಕ್ಕೆ ಮದುವೆ ಮಾಡಿದ್ದಾದರೆ ನಮ್ಮ ಜವಾಬ್ದಾರಿ ತಪ್ಪುತ್ತಿತ್ತು ನಿಜ. ಇಷ್ಟು ಯಾಕೆ ಅವಸರ ಮಾಡಬೇಕು? ಬೇಗ ಹಡೆದು ದಣಿದು ಮನೆಯಲ್ಲಿ ಬಂದು ಬೀಳಲಿಕ್ಕೇನು? ಸ್ವಲ್ಪ ಓದಿಕೊಳ್ಳಲಿ. ನಾಳೆ ಕಷ್ಟ ಕಾಲಕ್ಕೆ ಅವಳ ಜೀವನಕ್ಕಾದರೂ ಸ್ವತಂತ್ರವಾದಾಳು. ಅವಳಿಗೆ ಇಷ್ಟು ಬೇಗ ಲಗ್ನವಾಗುವ ಇಚ್ಛೆಯೂ ಇಲ್ಲ.

ಸುಧಾ— ಅವಳಿಗೆ ಯಾವ ಮನಸ್ಸೂ ಇರಲಾರದು. ಅವಳಿಗೆ ಲಕ್ಷ್ಮಣನನ್ನು ಬಿಟ್ಟಿರಲು ಮನಸ್ಸು ಬಂದೀತೆ?

ಸದಾ—ಯಾಕೆ ಈಗ ಲಕ್ಷ್ಮಣನ ಹೆಸರನ್ನು ಎಳೆಯುತ್ತೀಯಾ? ಅವನೇನು ತಪ್ಪು ಮಾಡಿದ್ದಾನಂತೆ?

ಸುಧಾ—ನಾನು ಮಗುವಲ್ಲ ಸದಾ, ಲಕ್ಷ್ಮಣನ ವಿಷಯವೂ ನನಗೆ ಗೊತ್ತು. ಅವಳ ಸಂಗತಿಯೂ ನನಗೆ ಗೊತ್ತು. ಅವನಿಂದಾಗಿಯೇ ಕಳೆದ ಬಾರಿಯ ನಂಟುತನ ತಪ್ಪಿದ್ದು. ನಾಳೆ ಅವನು ಯಾರನ್ನೂ ಲಗ್ನವಾಗಲಿ, ಬಿಡಲಿ, ಇವಳು ಎಣಿಸಿಕೊಂಡ ಹಾಗೆ ಎಂದೂ ಆಗುವು

ದಿಲ್ಲ. ಅವನು ತೀರ ಘಟಿಂಗ. ಅವನನ್ನು ಮನೆಯಿಂದ ಹೊರಗೆ ಹಾಕಿಸಿ ಅವನ ಚಿಂತೆ ಇವಳಿಗೆ ಉಂಟಾಗದಂತೆ ಮಾಡಿದ್ದೆ. ನೀನು ತಿರುಗಿ ಅವನನ್ನು ಮನೆಗೆ ಹೊಗಿಸಿದಿಯಂತೆ. ನನಗೆ ಎಲ್ಲ ಸುದ್ದಿಯೂ ಗೊತ್ತುಂಟು.

ಸದಾ—ಲಕ್ಷ್ಮಣ ಅಂತಹ ಅಪರಾಧ ಮಾಡಿದ ಹಾಗೆ ಕಾಣುವುದಿಲ್ಲ ನನಗೆ. ನೀನು ತಿಳಿದಿದುದಕ್ಕಿಂತ ಚೆನ್ನಾಗಿ ನಾನು ಅವನನ್ನು ಬಲ್ಲೆ. ಒಮ್ಮೆ ಅವಳು ಲಕ್ಷ್ಮಣನನ್ನೇ ಮದುವೆಯಾದಳೆಂದು ತಿಳಿಯುವ. ಅದು ಅವಳ ಇಷ್ಟ. ಅವನ ಇಷ್ಟ. ಮನುಷ್ಯರಾದವರಿಗೆ ಅಷ್ಟೂ ಸ್ವಾತಂತ್ರ್ಯ ಬೇಡವೇ ?

( ಡಾ. ರಾಮರಾಯರು ಅಲ್ಲಿಗೆ ಬರುವರು. )

ರಾಮರಾಯ—ಯಾವಾಗ ಬಂದದ್ದು ಸದಾಶಿವ ?

ಸದಾ—ನಾನು ಬಂದು ಎರಡು ದಿನವಾಯಿತು.

ರಾಮರಾಯ—ಮುಂಬಯಿಯಲ್ಲಿ ಇದ್ದೀಯಂತೆ. ಏನು ಕೆಲಸದಲ್ಲಿ ?

ಸದಾ—ಅಲ್ಲೇನೂ, ಯಥಾಪ್ರಕಾರ War supplies.

ರಾಮ—ಏನು ಬರುತ್ತದೆ ?

ಸದಾ—ಬರುತ್ತದೆ ಒಂದು ನೂರಿಪ್ಪತ್ತು. ಅಲ್ಲಿಂದಲ್ಲಿಗೆ ಆಗುತ್ತದೆ. ಚಿದಾನಂದನಿಗೆ ಒಂದು ಐವತ್ತು ಕಳುಹಿಸುತ್ತಾ ಇದ್ದೇನೆ.

ರಾಮ—ರಜೆಯ ಮೇಲೆ ಬಂದೀಯಾ? ಕೆಲವು ದಿನ ಇದ್ದೀಯಾ?

ಸದಾ—ಇಲ್ಲ, ಒಂದು ವಾರದ ರಜೆಯಲ್ಲಿ ಬಂದೆ.

ಸುಧಾ—ಅದೂ ನಮ್ಮ ಅಪ್ಪನ ಕೆಲಸ. ತಂತಿ ಕೊಟ್ಟು ಕರೆಯಿಸಿಕೊಂಡಿದ್ದಾರಂತೆ. ಅವರಿಗೆ ಈ ವಯಸ್ಸಿನಲ್ಲಿ ಅರಳು ಮರಳು. ತಾವು ಏನು ಮಾಡುತ್ತೇವೆಂದು ಗೊತ್ತೇ ಇಲ್ಲ. ಕಾಗದ ಬರೆಯುವುದರ ಬದಲಿಗೆ ತಂತಿ ಕೊಟ್ಟು ಕರೆಯಿಸಿಕೊಂಡಿದ್ದಾರೆ.

ರಾಮ—ಶಂಕರರಾಯರು ನನಗೆ ಗೊತ್ತಿಲ್ಲವೇ ? ಅವರಿಗೆ ಎಲ್ಲಾ ವಿಷಯದಲ್ಲಿಯೂ ಗಡಿಬಿಡಿಯೇ.

ಸದಾ—ಇರುತ್ತೇ ಒಬ್ಬೊಬ್ಬರದ್ದು ಒಂದೊಂದು ಸ್ವಭಾವ.

ರಾಮು—ಸುಧಾ ನಾನು ತಿಳಿಸಿದ್ದನ್ನು ಸದಾಶಿವನಿಗೆ ಹೇಳಿದ್ದೀಯಾ?

ಸುಧಾ—ಇಲ್ಲ, ಇನ್ನು ಹೇಳಬೇಕಷ್ಟೆ. ಮಾತನಾಡುವ ಮೊದಲೆ ಕಂತೆ ಪುರಾಣ ಹೊರಟಿತು.

ರಾಮು—ಹೇಳು ಹೇಳು.

ಸುಧಾ— ಹೇಳುತ್ತೇನೆ— ಸದಾ, ಈಗ ಇವರೂ ಇದ್ದಾರೆ, ನೀನೂ ಇದ್ದೀಯು. ನಾವಿಬ್ಬರೂ ನಿನ್ನ ಹಿತಕ್ಕೂ ಮನೆಯ ಹಿತಕ್ಕೂ ಹೊರಗಿನ ವರೆಂದು ತಿಳಿಯುವುದಾದರೆ ಏನೂ ಆಡುವುದಿಲ್ಲ. ನಮಗೆ ಮನೆಯಲ್ಲಿ ಸ್ವಲ್ಪವಾದರೂ ಅಭಿಮಾನ ಇದೆ ಎಂದು ತಿಳಿಯುವುದಾದರೆ ಆಡುತ್ತೇನೆ.

ಸದಾ—ಏನು ಹೇಳುವುದೋ ಹೇಳಬಹುದಲ್ಲಾ? ಕೇಳುವುದಕ್ಕೆ ಅಡ್ಡಿ ಇದೆಯೇ?

ರಾಮು—ಅದು ಸರಿ. ನಾನೇ ಹೇಳಿಬಿಡುತ್ತೇನೆ. ಸದ್ಯ ಯಾರೂ ಪೇಶಂಟ್ಸ್ ಕಾದಿಲ್ಲ. ನಾಲ್ಕು ನಿಮಿಷ ಬಿಡುವಿದೆ. ಸದಾಶಿವ, ನಿನ್ನ ಅಣ್ಣ ನಿಗೂ ಈ ವಿಚಾರದಲ್ಲಿ ಕಾಗದ ಬರೆಯಲು ಹೇಳಿದ್ದೆ. ನಿಮ್ಮ ಮನೆಯ ತೊಂದರೆಗಳೆಲ್ಲಾ ನನಗೆ ಗೊತ್ತು. ನಾನು ಸರಳವಾಗಿ ಮಾತನಾಡುವವ. ನೀನೂ ಓದಿ ತಿಳಿದವ. ನಮ್ಮ ಜಾತಿ ಸಮಾಜದ ಸ್ಥಿತಿ ನಿನಗೆ ಗೊತ್ತು. ಹುಡುಗಿಯನ್ನು ಹೊರಗೆ ಕೊಡುವುದಾಗಲಿ, ತರುವುದಾಗಲೀ ತುಂಬಾ ಕಷ್ಟದ ಸಂಗತಿ. ನಿನ್ನ ತಂದೆಗಾಗಲೀ, ನನಗಾಗಲೀ ಆ ಮಾತು ಇಬ್ಬ ರಿಗೂ ಸಮವೇ. ಕಳೆದಾವರ್ತಿ ನಾನು ನಿಮ್ಮ ಶ್ರೀಮತಿಯನ್ನು ರಾಜಾ ರಾಮುನಿಗೆ ತರುವುದೆಂದು ಯೋಚನೆ ಮಾಡಿದ್ದು. ಆದರೆ ನಿಮ್ಮ ಮನೆ ಯವರಿಗೆ ಅಷ್ಟು ಉಮೇದು ಇದ್ದದ್ದು ಕಾಣಲಿಲ್ಲ.

ಸದಾ—ರಾಜಾರಾಮುನಿಗೂ ಅಷ್ಟು ಬೇಗನೆ ಮದುವೆಯಾಗುವುದು ಮನಸ್ಸಿರಲಿಲ್ಲವಲ್ಲ.

ರಾಮು—ಅದೂ ನಿಜವೆಂದು ತಿಳಿಯುವ. ಆದರೆ ಅವನು ಈಗ ಒಡಂಬಟ್ಟು ಕಾಗದ ಬರೆದಿದ್ದಾನೆ. ಅವನಿಗೀಗ ಜಬಲ್‌ಪುರದಲ್ಲಿ ಒಳ್ಳೆಯ ಕೆಲಸವಾಗಿದೆ. ಮುನ್ನೂರು ರೂಪಾಯಿ ಮೇಲೆ ಸಂಬಳವಿದೆ. ಸಂಸಾರ ನಡೆಯಿಸಿಕೊಂಡು ಇರಲಿಕ್ಕೆ ಆ ಸಂಪಾದನೆ ಸಾಕು. ನೀನು ನಿನ್ನ ತಂದೆಯವರ ಹತ್ತಿರ ಹೇಳು ನಾನು ಮಾತನಾಡಿದರೆ ಅವರು ಏನೇನೋ

ತಿಳಿದಾರು. ನಮ್ಮ ರಾಜಾರಾಮನಿಗೆ ಹತ್ತಾರು ಜಾತಕಗಳು ಬಂದಿವೆ. ಶ್ರೀಮತಿಯನ್ನು ಕಾಲೇಜಿಗೆ ಹಾಕಿ ಹಣಕ್ಕೆ ಒದ್ದಾಡುವ ಬದಲು ಈ ಸಮ್ಮಂಧ ಆದರೆ ಒಂದು ರಗಳೆ ತಪ್ಪಿತಲ್ಲಾ ?

ಸದಾ— ಆಗಲಿ ತಂದೆಯವರಿಗೆ ಹೇಳುತ್ತೇನೆ.

ರಾಮು — ನೀನು ತಂದೆಯವರಿಗೆ ಚೆನ್ನಾಗಿ ಹೇಳಿದರೆ ಅವರು ಒಪ್ಪಿಯೇ ಒಪ್ಪುತ್ತಾರೆ. ನಿನ್ನ ತಂದೆಯವರಿಗೆ ಸುಧಾಕರನ ಮೇಲೆ ಈಗ ಸ್ವಲ್ಪ ಅಸಮಾಧಾನ. ನಾನಾಗಲೀ, ಸುಧಾಕರನಾಗಲೀ ಹೇಳಿದರೆ ಏನೇನೋ ತಿಳಿದಾರು. ಅದಕ್ಕಾಗಿ ನಿನ್ನನ್ನು ಮಾತನಾಡಿಸಿದ್ದು. ನಿನಗೂ ರಾಜಾರಾಮನ ಸಂಗತಿ ಗೊತ್ತು.

ಸದಾ—ರಾಜಾರಾಮು ನನ್ನ ಸಹಪಾಠಿ ಅಲ್ಲವೇ? ನಮ್ಮಿಬ್ಬರಿಗೆ ಬಹಳ ಚೆನ್ನಾದ ಗೆಳತನ, ಬಳಕೆ.

ರಾಮು— ಆದರೆ ಈ ಮಾತು ಒಂದೇ ಎಂದು ತಿಳಿಯಬಾರದು. ಅದಕ್ಕೆ ಹೊಂದಿಕೊಂಡೇ ಇನ್ನೊಂದು ಮಾತು ಆಡುತ್ತೇನೆ. ನಿಮ್ಮ ತಂದೆಯವರ ತೊಂದರೆ ಕಷ್ಟ ಏನಿದ್ದರೂ ಆ ಜವಾಬ್ದಾರಿ ನಮಗೆ. ಏನು ನಮ್ಮಲ್ಲಿ ಮಾತು ಬಂದಿದ್ದರೂ ಅದನ್ನು ಮರೆತು ನಾವು ಪರಸ್ಪರ ಹಿತ ವಂದಿಗರಾಗಬೇಕೆಂದು ನನ್ನ ಅಭಿಪ್ರಾಯ.

ಸದಾ—ಆಗಲಿ. ಏನು ಹೇಳಿ.

ಸುಧಾ—ಸದಾ, ಮುಂದಿನ ವಿಷಯ ಮಾವನಿಗೆ ಹೇಳುವುದಕ್ಕೆ ಸಂಕೋಚವಾದೀತು. ನಾನು ಹೇಳುತ್ತೇನೆ. ಕಾರಣ ಇಷ್ಟೆ, ಮಾವನದು ಸೀಮಂತಿನಿಯನ್ನು ನಿನಗೆ ಕೊಡಬೇಕೆಂದು ಮನಸ್ಸು. ನೀನು ಅಪೇಕ್ಷಿ ಪಟ್ಟರೆ ವರದಕ್ಷಿಣೆಯನ್ನೋ ಅಥವಾ ವಿದ್ಯಾಭ್ಯಾಸ ಮುಂದರಿಸುವು ದಾದರೆ ಅವರು ಹಣ ಕೊಡುತ್ತಾರೆ. ಯಾವ ರೀತಿಯಿಂದಾದರೂ ನಮ್ಮ ಮನೆಯವರಿಗೆ ಉಪಕಾರ ಮಾಡಬೇಕೆಂದು ಅವರ ಮನಸ್ಸು. ಅದಕ್ಕೋಸ್ಕರ ನಿನ್ನ ಮನಸ್ಸು ಏನೆಂದಿದೆಯೆಂಬುದನ್ನೂ ತಿಳಿಸು. ಬದಲು ನೀನು ಈಗ ಹೇಳಿದವನ ವಿಷಯಕ್ಕೆ ನೀನು ಅಭಿಮಾನ ಉಳ್ಳವ ನಾದರೆ ಈ ವಿಷಯವನ್ನೇ ಬಿಟ್ಟು ಬಿಡಬಹುದು.

ರಾಮು—ಏನದು ?

ಸುಧಾ— ಬೇರೇ ವಿಷಯ ಅದು. ಮಾವ ನೀವಿದ್ದರೆ ಅವನಿಗೆ ಸಂಕೋಚವಾದೀತು. ನಾವು ನಾವೇ ಸ್ವಲ್ಪ ಮಾತನಾಡಿಕೊಳ್ಳುತ್ತೇವೆ.

ಸದಾ— ಅವರಿದ್ದರೆ ಏನಂತೆ?

ರಾಮು— ಇಲ್ಲ, ನನಗೂ ಬೇರೆ ಕೆಲಸವಿದೆ. (ಆಫೀಸ ಹುಡುಗನಿಗೆ) ಬಾ ಬಾಯ್! ಸಿರಿಂಜ್ ಸ್ಟರಲೈಜ್ ಮಾಡಿದ್ದೀಯಾ? ಎಮಿಟಿನ್ ಪೆಕೇಟು ತೆಗೆದಿಡು. (ತೆರಳುವರು.)

ಸುಧಾ— ನನ್ನ ಅಭಿಪ್ರಾಯದಂತೆ ಇದು ಬಹಳ ಒಳ್ಳೆಯ ಸಂದರ್ಭ. ಆದರೆ ನಿಮಗೆ ಬೇರೆ ಏನಾದರೂ ಗಾಳಿಗೋಪುರ ಕಟ್ಟುವ ಯೋಚನೆ ಇದರೆ ಅವರೂ ಹೆಚ್ಚಿಗೆ ಹೇಳುವುದಿಲ್ಲ. ನಾನೂ ಹೆಚ್ಚಿಗೆ ಹೇಳುವುದಿಲ್ಲ.

ಸದಾ— ಗಾಳಿಗೋಪುರ ಕಟ್ಟುವ ಇಚ್ಛೆ ಯಾರಿಗೂ ಇಲ್ಲ. ನಮ್ಮ ಬದುಕಿನ ತೂಕ ನಮಗೆ ಚೆನ್ನಾಗಿ ಇದೆ. ಅಲ್ಲಿ ಕನಸಿಗೂ ಸ್ಥಾನವಿಲ್ಲ. ಗಾಳಿಗೋಪುರಕ್ಕೂ ಎಡೆಯಿಲ್ಲ. ನನ್ನ ವಿಚಾರ ಮೊದಲು ಹೇಳುತ್ತೇನೆ. ಇನ್ನು ಮೂರು ವರ್ಷ ಕಾಲ ನನ್ನ ಮದುವೆಯ ಪ್ರಶ್ನೆಯೇ ಇಲ್ಲ. ನನ್ನ ಸಂಪಾದನೆ ಏನಿದ್ದರೂ ಚಿದಾನಂದನ ವಿದ್ಯೆ ಮುಗಿಯುವುದಕ್ಕೆ ಬೇಕು. ಆಮೇಲೆ ನನ್ನ ಕೆಲಸ ಭದ್ರವೆಂದು ಕಂಡರೆ ಆಮೇಲೆ ಮದುವೆಯ ಯೋಚನೆ. ಅಲ್ಲದೆ ಸದ್ಯಕ್ಕೆ ಹೇಗಾದರೂ ಮಾಡಿ ಅಪ್ಪನ ಸಾಲದ ಹೊರೆಯನ್ನು ತಗ್ಗಿಸಬೇಕು. ಶ್ರೀಮತಿಯ ವಿಚಾರ ನನಗೆ ಯಾವ ಆಕ್ಷೇಪವೂ ಇಲ್ಲ. ಅಪ್ಪನಿಗೂ ಹೇಳುತ್ತೇನೆ. ಅವಳಿಗೂ ಹೇಳುತ್ತೇನೆ. ಅದನ್ನು ನಿಶ್ಚಯ ಮಾಡಬೇಕಾದವಳು ಅವಳು.

ಸುಧಾ—ಅಷ್ಟು ಸ್ವಾತಂತ್ರ್ಯ ಅವಳಿಗೆ ಕೊಟ್ಟುಬಿಟ್ಟಿದ್ದೀರಾ?

ಸದಾ — ಸ್ವಾತಂತ್ರ್ಯ ಏನು? ನಮ್ಮ ನಮ್ಮ ಮದುವೆಯ ಸ್ವಾತಂತ್ರ್ಯ ನಮಗಿದೆಯಂತೆ. ತನಗೆ ಸಮ್ಬಂಧಿಸಿದ ವಿಚಾರದಲ್ಲಿ ಅವಳು ಯೋಚಿಸಬೇಡವೇ? ಅವಳು ಒಪ್ಪಿದವನನ್ನು ಅವಳು ಲಗ್ನವಾಗಬೇಕು. ರಾಜಾರಾಮು ಚೆನ್ನಾದವ ಯೋಗ್ಯ ಎಂಬುದು ನನಗೂ ಗೊತ್ತು. ಅವನಾದರೆ ನನಗೆ ಸಂತೋಷವೇ. ಆದರೆ ಒಪ್ಪಿಗೆ ಅವಳಿಂದ ಬರಬೇಕು.

ಸುಧಾ— ಅವಳ ಒಲವು ನಿನಗೆ. ಗೊತ್ತೇ ಇದೆಯಲ್ಲ. ಅವಳು ಲಕ್ಷ್ಮಣನಿಗೆ ಕಾಗದ ಬರೆಯುತ್ತಿದ್ದುದು ಒಂದು ಆಶ್ಚರ್ಯವಲ್ಲ.

ಸದಾ — ಏನು ಅಪರಾಧ ? ಸಹಜವಾದ ಪ್ರೀತಿಯನ್ನು ನಾವು ತಡೆಯಲಿಕ್ಕೆ ಪ್ರಯತ್ನಿಸಿದರೆ ಅದು ಬೇರೊಂದು ದಾರಿ ಹಿಡಿಯುತ್ತದೆ. ಆದರೆ ನಾನು ತಿಳಿದ ಹಾಗೆ ಅವಳು ಯಾವೊಂದು ನಿರ್ಧಾರವನ್ನೂ ಮಾಡಿಲ್ಲ. ಸದ್ಯ ಅವಳ ಮನಸ್ಸು ವಿದ್ಯಾಭ್ಯಾಸದ ಕಡೆಗೆ ಇದೆ. ಆದರೆ ಈ ವಿಷಯ ಅವಳಿಗೂ ಹೇಳಬಹುದು. ಅಪ್ಪ ಅಮ್ಮನಿಗೂ ಹೇಳಬಹುದು.

ಸುಧಾ—ಆದರೆ ಮಾವ ಈ ವಿಚಾರವನ್ನು ಹೇಳುವಾಗಲೇ ಇದು ನಾಟಿ ಮದುವೆ ಆಗುವ ಸಂದರ್ಭವಿದ್ದರೇನೇ ಸಾಧ್ಯ ಎಂದು ತಿಳಿಸಿದ್ದು. ಅವಳ ವಿಷಯ ಎಷ್ಟು ಮುಖ್ಯವೋ, ಅಷ್ಟೇ ನಿನ್ನ ವಿಷಯ ಮುಖ್ಯ. ಅವರಿಗೆ ಉದ್ಯೋಗದಿಂದಾಗಿ ಇಷ್ಟು ಬಿಡುವಿಲ್ಲ. ಹಾಗೊಮ್ಮೆ ಮುಂಬಯಿಗೆ ಹೋಗಿ ಬಂದರೆ ನಿಮಿಷದಲ್ಲಿ ನೆಂಟಸ್ತಿಕೆ ಸಿಗುತ್ತದೆ. ಆದರೆ ನನ್ನ ಅತ್ತಿಗೆ ಮಕ್ಕಳು ಆದಷ್ಟು ಸಮೀಪವಿರಬೇಕೆಂದು ಆಸೆ.

ಸದಾ—ನಾನೇನು ಪುತ್ತೂರಿನಲ್ಲಿಯೇ ಇರುವವನೆ ? ನನ್ನ ವಿಚಾರದಲ್ಲಿ ಯಾವ ಪ್ರಶ್ನೆಯೂ ಉಳಿದಿಲ್ಲ. ಅದು ಖಂಡಿತವೇ. ನನ್ನ ಹತ್ತಿರವೂ ಬಂದಿದ್ದರು, ತಂದೆಯವರ ಹತ್ತಿರವೂ ಬೇರೆಯವರು ಬಂದಿದ್ದರು. ಕೈತುಂಬ ವರದಕ್ಷಿಣೆ ಕೊಡುವವರೂ ಇದ್ದಾರೆ. ಆ ಹಣದಿಂದ ನಮ್ಮ ಕಷ್ಟ ಪರಿಹಾರ ಮಾಡಿಕೊಳ್ಳಬೇಕೆಂಬ ಇಚ್ಛೆ ನನಗಿಲ್ಲ. ಹಾಗೆಲ್ಲ ಮಾಡಿದರೆ ನಾಳೆ ಹಂಗಿನ ಮಾತು ಕೇಳಬೇಕಾದೀತು.

ಸುಧಾ—ಅಷ್ಟೊಂದು ಖಂಡಿತವಿದ್ದರೆ ನನ್ನ ಹತ್ತಿರ ಬಂದು ಸಹಾಯ ಗಿಹಾಯ ಎಂದು ಏನು ಫಲ ? ನನ್ನ ಹಿತೋಕ್ತಿ ನಿನಗೆ ಹಿಡಿಸುವುದಿಲ್ಲವಂತೆ. ಸಹಾಯ ಮಾತ್ರ ಬೇಕು ಎಂದರೆ ?

ಸದಾ—ಸಹಾಯ ಕೇಳಲಿಲ್ಲ. ನನ್ನ ಬಗ್ಗೆಯೂ ಕೇಳಲಿಲ್ಲ. ತಂದೆಯವರ ಬಗ್ಗೆಯೂ ಕೇಳಲಿಲ್ಲ. ಅಂಥ ದೊಡ್ಡ ಮಾತು ನೀನು ಆಡಬಾರದು. ತಂದೆಯವರ ಸಾಲ ಮಕ್ಕಳಾದ ನಮ್ಮ ಋಣ. ಇಷ್ಟು ದಿವಸ ಅವರ ಕೃಪೆಯಿಂದಲೇ ಓದಿದ್ದು, ಬದುಕಿದ್ದು. ನಿನಗೆ ಮೆಡಿಕಲ್‌ಗೆ

ನಾಲ್ಕು ವರ್ಷಗಳ ತನಕವೂ ಹಣ ಕೊಟ್ಟದ್ದು ಅವರೇ. ಹಿರಿಯರಿಗೆ ನಾವು ಸಲಿಸುವ ಯಾವ ಋಣವೂ ಇಲ್ಲವೆಂದು ನೀನು ತಿಳಿಯುವುದಾದರೆ.... ?

ಸುಧಾ—ನಿನ್ನ ಉಪನ್ಯಾಸ, ಹಿತೋಪದೇಶ ಯಾವುದೂ ನನಗೆ ಬೇಕಿಲ್ಲ. ಅಲ್ಲದೆ ಈಗ ನಾವು ಏನು ಹೇಳಿದೆವೋ ಅದು ನಾಳೆಯು ವರೆಗೂ ಇರುತ್ತದೆ ಎಂದು ತಿಳಿಯಬೇಕು. ಇವತ್ತು ಏನೋ ನಿನಗೆ ತಿಂಗಳಿಗೆ ನೂರು ನೂರಿಪ್ಪತ್ತು ರೂಪಾಯಿ ಸಿಗಬಹುದು. ತಂದೆಯನ್ನು ಉದ್ಧಾರ ಮಾಡಿಬಿಡುತ್ತೇನೆಂದು ಕಾಣಿಸಬಹುದು. ನಾಲ್ಕು ದಿನ ಹೋದರೆ ಅದು ಯಾವುದೂ ಆಡುವಷ್ಟು ಸುಲಭವಲ್ಲಾ ಎಂದು ತಿಳಿದೀತು.

ಸದಾ—ಅದು ಹೇಗೂ ಇರಲಿ ಸುಧಾ. ಅಪ್ಪಾ ನಿನ್ನನ್ನು ಕೇಳಿ ಬಾ ಎಂದು ಹೇಳಿ ಕಳುಹಿಸಿದರು. ಅವರ ಮಾತು ನಿನಗೆ ಹೇಳುವ ಕೆಲಸ ನನ್ನದು.

ಸುಧಾ—ಏನದು ಅಲ್ಟಿಮೇಟಮ್ ?

ಸದಾ—ಹೇಗೂ ತಿಳಿ ನೀನು. ಅಲ್ಟಿಮೇಟಮ್ ಆದರೆ ಹಾಗೆ. ಎಡ್ವೈಜ್ ಅಂದರೆ ಹಾಗೆ. ಅವರು ಇಷ್ಟನ್ನು ಕೇಳಿ ಬಾ ಅಂದಿದ್ದಾರೆ. ಮೂರು ಸಾವಿರದಷ್ಟು ತೀರ ಅಡಚಣೆಯ ಸಾಲವಿದೆ. ಅದರ ಅರ್ಧದಷ್ಟಾದರೂ ನೀನು ತೀರಿಸಬೇಕು. ಇನ್ನು ಶ್ರೀಮತಿದಾಗಲೀ, ಚಿದಾನಂದದಾಗಲೀ, ಒಬ್ಬರ ವಿದ್ಯೆಯ ಖರ್ಚು ವೆಚ್ಚ ನೀನು ನೋಡಬೇಕು.

ಸುಧಾ—ಓಹೋ, ಈಗಲೇ ಹಿಸೆ ವಿಚಾರ ಬಂದ ಹಾಗಿದೆ. ಮೂಲದಲ್ಲಿ ಹಿಸೆ ಇಲ್ಲವಾದರೂ ಸಾಲದಲ್ಲಿಯಾದರೂ ಬೇಕಲ್ಲ ? ಅಪ್ಪನಿಗೆ ಹೇಳು, ಶ್ರೀಮತಿಗೆ ಇಂಟರ್ ಅನಾವಶ್ಯಕವೆಂದು.

ಸದಾ—ನಿನ್ನ ಹೆಂಡತಿಗೆ ಇಂಟರ್ ಓದಿದ್ದು ಹೆಚ್ಚಾಗಿ ಕಾಣಿಸುವುದಿಲ್ಲ. ತಂಗಿಗೆ ಮಾತ್ರ ಹೆಚ್ಚಾಗುತ್ತೆ ಅಲ್ಲವೆ ?

ಸುಧಾ—ಅವಳು ಕಲಿತಾದ ಮೇಲೆ ನಾನು ಮದುವೆ ಆದದ್ದು. ಮೊದಲೇ ಆಗಿದ್ದರೆ S.S.L.C. ಯೇ ಸಾಕೆನ್ನುತ್ತಿದ್ದೆ.

ಸದಾ—ಆಯಿತು ಒಂದು ವಿಚಾರ. ಸಾಲದ ವಿಚಾರ ಏನು ಹೇಳುತ್ತೀಯಾ ? ಏನಾದರೂ ವಹಿಸಿಕೊಳ್ಳುವುದು ಸಾಧ್ಯವೇ ?

ಸುಧಾ—ನಮ್ಮ ಮಾತು ಕೇಳಿದರೆ ಮಾತ್ರ ಎಲ್ಲಾ ವಿಚಾರ; ಇಲ್ಲವಾದರೆ ಏನೂ ಇಲ್ಲ. ನಾಳೆ ತಿರುತಿರುಗಿ ಸಾಲ ಮಾಡಿಯಾರು. ಶ್ರೀಮತಿಯ ಚಿನ್ನಕ್ಕೆ ಸಾಲ, ವಿದ್ಯೆಗೆ ಸಾಲ ಎಂದರೆ ಕೊಟ್ಟು ಪೂರೈಸಲಾಗದ ಸಂಗತಿ. ನಮಗೂ ಮುಂದಿನ ಸ್ಥಿತಿ ಏನೆಂದು ಸ್ಪಷ್ಟವಾದ ಮೇಲೆಯೇ ನಿರ್ಣಯಕ್ಕೆ ಬರುವುದು ಸಾಧ್ಯ.

ಸದಾ—ಆಯಿತು ಹಾಗೆಯೇ ಹೇಳುತ್ತೇನೆ.

ಸುಧಾ—ನೀನೇ ವಿಚಾರ ಮಾಡು. ಈಗ ತಂದೆಯವರು ಯಾವ ಮಾತನ್ನು ಕೇಳುವುದಿದ್ದರೂ ಅದು ನಿನ್ನ ಮಾತು. ನೀನು ಪಕ್ಷವನ್ನು ವಹಿಸಿ ಮಾತನಾಡುವ ಹಾಗೆ ಕಾಣುತ್ತದೆ. ನಾವು ಹಿತವಂದಿಕರಾಗಿ ನಿನಗೆ ಕಾಣಿಸುವುದಿಲ್ಲ.

( ಅಷ್ಟರಲ್ಲಿ ದವಾಖಾನೆಯ ಹುಡುಗ ಸುಧಾನನ್ನು ಕರೆಯಲು ಬರುತ್ತಾನೆ. )

ಹುಡುಗ—ರಾಯರೇ ನೀವು ಅಲ್ಲಿಗೆ ಬರಬೇಕಂತೆ. ತಮ್ಮ ಒಬ್ಬರಿಂದಲೇ ಆಗುವುದಿಲ್ಲವೆಂದರು ದೊಡ್ಡ ಡಾಕ್ಟರರು.

ಸುಧಾ—ಸ್ವಲ್ಪ ತಡಿ. ಸದಾ ನಿನಗೆ ಈಗಲೇ ಹೋಗಬೇಕೆಂದಿಲ್ಲವಲ್ಲಾ ?

ಸದಾ—ಸುಮ್ಮನೆ ಕುಳಿತು ಏನು ಮಾಡುವುದು ?

ಸುಧಾ—ಒಳಗೆ ಕಾಫಿ ಮಾಡಿರಬೇಕು.

ಸದಾ—ಕಾಫಿ ಏನೂ ಬೇಡವಿತ್ತು...... ಶ್ರೀಮತಿ

( ಲಕ್ಷ್ಮಣನ ತಂದೆ ಶೇಷಗಿರಿ ಅಲ್ಲಿಗೆ ಬರುತ್ತಾನೆ. )

ಸದಾ—ನಮಸ್ಕಾರ ಶೇಷಗಿರಿ ? ಹೇಗಿದ್ದಿಯಾ ?

ಶೇಷಗಿರಿ—ನಾನು ನಿಮ್ಮ ಮನೆಗೆ ಬರಬೇಕೆಂದು ಯೋಚನೆ ಮಾಡಿದ್ದೆ. ಲಕ್ಷ್ಮಣ ಸಹ ನಿಮ್ಮನ್ನು ಕಾಣಬೇಕೆಂದು ಬರೆದಿದ್ದಾನೆ. ಅವನು ಮುಂಬಯಿಯಲ್ಲಿ ನಿಮಗೆ ಸಿಕ್ಕಿರಬೇಕು. ಯಾವಾಗ ಸಿಗಲಿ ?

ಶ್ರೀಮತಿ—( ಅಲ್ಲಿಗೆ ಬಂದು ) ಅಣ್ಣಾ ಕಾಫಿ ಕುಡಿಯಲು ಒಳಗೆ ಬರಬೇಕಂತೆ.

ಸದಾ—ಬೇಡವಿತ್ತು. ಮಾತನಾಡಿಯಾದರೂ ಹೊರಡುವ.

ಶ್ರೀಮತಿ— (ಮೆಲ್ಲಗೆ ಕಿವಿಯಲ್ಲಿ) ಇವತ್ತೆಲ್ಲ ಟ್ರಾನ್ಸ್‌ಫರ ಸೀನು. ಬಹಳ ಮಾತು, ಬಹಳ ಉಪಚಾರ.

ಸದಾ—ಎಲ್ಲಾ ಠಕ್ಕು.

ಶ್ರೀಮತಿ—ಬಾ ಒಳಕ್ಕೆ. ಕಾದಿದ್ದಾರೆ, ಬೇಸರ ಮಾಡಿಯಾರು.

ಸೇವಂತಿ— (ಅವಳೂ ಅಲ್ಲಿಗೆ ಬಂದು) ಏನು ಶ್ರೀ, ಅಣ್ಣನನ್ನು ಕರೆ ಎಂದರೆ ನೀನೂ ಮಾತನಾಡುತ್ತ ನಿಂತಿದ್ದೀಯಾ?

ಶ್ರೀಮತಿ—ಬರುತ್ತಾನೆ ಈಗ.

ಸದಾ—ಡಾಕ್ಟರೂ ಅಣ್ಣನೂ ಬರಲಿ. (ಸೇವಂತಿಯ ಕೈಯ ಕೂಸನ್ನು ಕಂಡು) ಇವರೇನೇ ಯುವರಾಜರೂ! ಎಷ್ಟು ತಿಂಗಳಾಯಿತು ಅತ್ತಿಗೆ?

ಸೇವಂತಿ—ಆರಾಗಿ, ಏಳಾಯಿತು.

ಸದಾ—ತುಂಬ ಚೆನ್ನಾಗಿದೆ. (ಅದರೊಡನೆ ಆಟವಾಡುತ್ತ) ಏನು ಹೆಸರು?

ಸೇವಂತಿ—ಏನಿಟ್ಟರೆ ಆಗಬಹುದು?

ಸದಾ—ನೀವು ಇಟ್ಟಿದ್ದೀರಿ ಏನು? ನಾನಾದರೆ ಚಂದ್ರಮೋಹನ ಎಂದು ಇರಿಸುತ್ತಿದ್ದೆ.

ಸೇವಂತಿ—ಚಂದ್ರಮೋಹನ! ಊಹೂಂ. ಅದು ಸಿನೇಮಾ ಫ಼ಿಲಮ್ ಹೆಸರು.

ಸದಾ—ಹಾಗೋ. ರಾಮಮೋಹನ ಎಂದು ಇರಿಸು.

ಸೇವಂತಿ — ಆ ಹೆಸರು ಹಳತ್ತಾಯಿತು. ಮೋಹನ, ರಾಮ ಮೋಹನ ತೀರ ಸಾಮಾನ್ಯವಾದ ಹೆಸರಾಗಿಬಿಟ್ಟಿದೆ. ಅದಕ್ಕೇನೆ ಉಲ್ಲಾಸ ಎಂದು ಇಟ್ಟಿದ್ದೇವೆ. ಹೇಗಿದೆ?

ಸದಾ—ಬಹಳ ಚೆನ್ನಾಗಿದೆ.

ಸೇವಂತಿ—ಬಾ, ಕಾಫಿ ತಣಿಯುತ್ತೆ.

ಸದಾ—ಅಣ್ಣ ಮತ್ತು ಮಾವ?

ಸೇವಂತಿ—ಅವರಿಗೆ ದಿನಕ್ಕೆ ಎಂಟು ಸಾರಿ ಆಗುತ್ತದೆ. ಅಲ್ಲಿ ಕೊಡುವ ಒಂದೊಂದು ಇಂಜಕ್ಷನ್ನಿಗೆ ಇಲ್ಲಿ ಒಂದೊಂದು ಡೋಸ್ ಕಾಫಿ ಆಗುತ್ತದೆ.

ಸದಾ—ಆಗಲಿ ಬಾ ಶ್ರೀಮತಿ, (ಹೊರಡುತ್ತ) ಈಗ ಬಂದೆ ಶೇಷಗಿರಿ. ಇದ್ದೀಯಲ್ಲ ಆ ತನಕ ?

ಶೇಷಗಿರಿ—ಡಾಕ್ಟರಲ್ಲಿ ಸ್ವಲ್ಪ ಕೆಲಸವಿದೆ. ಇರುತ್ತೇನೆ; ಬೇಕಾದರೆ ಮನೆಗೆ ಬರುತ್ತೇನೆ.

ಸದಾ—ಸರಿ ಮನೆಗೆ ಬರುವುದಂತೂ ಇದ್ದೇ ಇದೆಯಲ್ಲ. ( ಶ್ರೀಮತಿ ಯೊಡನೆ ಹೋಗುತ್ತಾನೆ. )

( ಅಷ್ಟರಲ್ಲಿ ಸುಧಾಕರನ ಆಗಮನವಾಗುತ್ತದೆ. )

ಸುಧಾ—ಏನು, ಸದಾಶಿವ ಹೋಗಿಬಿಟ್ಟನೇ? . . . . ಶೇಷಗಿರಿ, ನೀನು ಬಂದು ಎಷ್ಟು ಹೊತ್ತಾಯಿತು ?

ಶೇಷಗಿರಿ—ನಾನು ಈಗಷ್ಟೆ ಬಂದೆ. ಅವರು ಒಳಗೆ ಕಾಫಿಗೆ ಹೋದರು. ನೀವು ಹೋಗಿ; ಕಾದಿದ್ದಾರೆ. ಡಾಕ್ಟರರು ತುಂಬ ಕೆಲಸದಲ್ಲಿ ದ್ದಾರೆಯೇ ?

ಸುಧಾ—ಈಗ ಬರುತ್ತಾರೆ. ಏನು M. and B. ಸಿಕ್ಕೀತೇ ?

ಶೇಷಗಿರಿ—ಅದೂ ಸಿಕ್ಕಿತು. ಇದೂ ಸಿಕ್ಕಿತು.

( ಸುಧಾಕರ ಹೋಗುತ್ತಾನೆ. ರಾಮರಾಯರು ಬರುತ್ತಾರೆ. )

ರಾಮು—ಬಂದೆಯ ಶೇಷಗಿರಿ ? ಏನಾಯಿತು ಹೋದ ಕೆಲಸ?

ಶೇಷಗಿರಿ—ಅದಕ್ಕೇನು ಡಾಕ್ಟರರೇ ! ನಾನು ಅಂದಿಲ್ಲವೇ ನಿಮಗೆ ? ಈಗಿರುವ ಮಾರ್ಕೆಟೇ ಬ್ಲ್ಯಾಕ್ ಮಾರ್ಕೆಟು ಎಂದು! ಮದ್ದು ತಂದಿದ್ದೇನೆ. ಆದರೆ ಲೇಬಲ್ ಸರಿಯೋ ಅಲ್ಲವೆಂದು ನೀವು ಹೇಳಬೇಕು. ಈಗೆಲ್ಲಾ ಸ್ಟಾಕ್ ಸಿಗುತ್ತದೆಯಂತೆ. ನಿನ್ನೆ ಒಬ್ಬರು, ಇಬ್ಬರು ಏಜೆಂಟರು ಬಂದಿದ್ದರು. ದರ ವಿಪರೀತ ಹೊರತು ಮಾಲಿಗೆ ಬರಗಾಲವಿಲ್ಲ.

ರಾಮು—ಕ್ವೀನ್‌ನಿಗೆ ಹೇಗಂತೆ ? ಕ್ವಿನಿನ್‌ಕ್ಯೂನೈನ್ ಹೈಡ್ರೊ ಕ್ಲೋರೈಡ್.

ಶೇಷಗಿರಿ—ನೂರ ಅರ್ವತ್ತರಲ್ಲಿ ತೆಗೆದುಕೊಂಡೆ. ಮಾರ್ಕೆಟು ಧಾರಣೆ ಮುನ್ನೂರ ಅರ್ವತ್ತರ ತನಕ ಇದೆಯಂತೆ. ಲೇಬಲ್ ಪೇಕಿಂಗ್ ಎಲ್ಲಾ ಸರಿ ಇದೆಯಂತೆ. ನೋಡಿ ( ಒಂದು ಗಂಟು ಬಿಡಿಸಿ ಮದ್ದುಗಳನ್ನು ಮುಂದೆ

ಇಂಸಿ) ತೆಗೆದುಕೊಳ್ಳಿ. ನೀವು ಹೇಳಿದ ಆ ಫ್ರೇಂಚ್ ಡ್ರಗ್ ಮಾತ್ರ ಸಿಗುವುದಿಲ್ಲವಂತೆ.

ರಾಮು—( ಅದನ್ನೆಲ್ಲ ಬಿಡಿಸಿ ನೋಡಿ. ) ಇಷ್ಟು ಇದ್ದರೆ ಧಾರಾಳವಾಯಿತು. ಪೋಟೇಸಿಯಂ ಬ್ರೊಮೈಡ್ ಇಲ್ಲದೆ ಒದ್ದಾಡುತ್ತಿದ್ದೆ. ಓ! ಇದೂ ಇದೆಯೊ? ಬೀಯರ್ಸ್ಸ್ ಪ್ರೊಡೆಕ್ಟ್ ಇನ್ನೂ ಸಿಗುತ್ತದೆ ಎಂದಾಂಗಾಯಿತು. ( ಬಿಲ್ ತೆಗೆದು ನೋಡಿ. ) ಒಟ್ಟು ಆರ್ನೂರ ಐವತ್ತ ಏಳೇ? ಸಂಜೆ ಇಲ್ಲವೇ ನಾಳೆ ಬಂದು ತೆಗೆದುಕೊಂಡು ಹೋಗು. ಕಾಫಿ ಕುಡಿಯುತ್ತೀಯೋ? ಬಾ ಹೋಗುವ. ನಮ್ಮ ಅಳಿಯನ ತಮ್ಮ ಬಂದಿದ್ದಾನೆ.

ಶೇಷಗಿರಿ—ಹೌದು ನೋಡಿದೆ. ಒಳಗೆ ಹೋದರು ಈಗ.

ರಾಮು—ಬಾ, ಏನು ದಾಕ್ಷಿಣ್ಯ ಮಾಡುತ್ತೀ? ನೆಪಕ್ಕೆ ನಿನ್ನದೊಂದು ಡ್ರಗ್ ಸ್ಟೋರ್ ಆದದ್ದು ತುಂಬ ಅನುಕೂಲವಾಯಿತು. ಮಂಗಳೂರಿಗೆ ಹೋದರೆ ಏನೇನೂ ಇಲ್ಲಾ ಅನ್ನುತ್ತಾರೆ. ಕಂಟ್ರೋಲ್ ದರದಲ್ಲಿಯೇ ಮದ್ದು ಸಿಗಬೇಕೆಂದು ಹಟ ಹಿಡಿದರೆ ಒಂದು ತಿಂಗಳು ಸಹ ನಮ್ಮ ಡಿಸ್ಪೆನ್ಸರಿ ನಡೆಯಲಾರದು. ಜನರು ಚಾರ್ಜು ಎಷ್ಟಾದರೂ ಕೊಡುತ್ತಾರೆ. ಮದ್ದು ಬೇಕಾದದ್ದು ಮುಖ್ಯ. ಒಂದಿಷ್ಟು ಸಾಲವರಶನ್ ಸಿಗುವುದಿಲ್ಲ. ಕ್ವಿನಿನ್ ಸಿಗುವುದಿಲ್ಲ. ಏನೂ ಇಲ್ಲ. ಮದ್ದಿನ ಚೀಟಿಗೆ ಹತ್ತು ಡ್ರಗ್ಸ್ ಬೇಕಾದರೆ ಮೂರು ಹಾಕುವುದು ಕಷ್ಟ. ಐದು ರೂಪಾಯಿ ಚಾರ್ಜು ಇರುವಲ್ಲಿ ಐವತ್ತು ರೂಪಾಯಿ ಜನರು ಕೊಡಲು ತಯಾರಿರುವಾಗ ಮದ್ದೇ ಇಲ್ಲದೆ ಹೋದರೆ ಏನು ಮಾಡಬೇಕು ? ಜೀವದ ಮುಂದೆ ಜನ ದುಡ್ಡನ್ನು ಲಕ್ಷ್ಯ ಮಾಡುವುದಿಲ್ಲ. ಅಲ್ಲದೆ ಈಗ ಕೆಲವರ ಕೈಯಲ್ಲಿ ಚೆನ್ನಾಗಿ ದುಡ್ಡಿದೆ. ಅಡಕೆ, ಭತ್ತ ಎಲ್ಲದಕ್ಕೂ ಧಾರಣೆ ಇದೆಯಲ್ಲಾ ?

ಶೇಷಗಿರಿ—ನಿಜ, ಹಣ ಕೊಡುತ್ತಾರೆ ಮಂದಿ. ಕೆಲವು ಸಾರಿ ಅಂಗಡಿ ಬಾಗಿಲಿಗೆ ಬಂದು ಅದನ್ನು ತರಿಸಿ ಕೊಡಿ, ಇದನ್ನು ತರಿಸಿ ಕೊಡಿ ಎಂದು ದಮ್ಮಯ್ಯ ಹಾಕುತ್ತಾರೆ.

ರಾಮು—ಶೇಷಗಿರಿ, ಈ ಯುದ್ಧದ ಸಮಯದಲ್ಲಿ ಮದ್ದಿನ ಶೊಪ್ ತೆರೆಯಬೇಕೆಂಬ ಆ ಬುದ್ಧಿ ಬಂದದ್ದು ತುಂಬಾ ಆಶ್ಚರ್ಯ

ಶೇಷಗಿರಿ—ನಾನು ಏನು ಮಾಡುತ್ತೇನೆ ಸ್ವಾಮೀ? ನಿಮ್ಮಂಥವರು ನಾಲ್ಕು ಮಂದಿ ಹಣ ಕೊಟ್ಟು ಮಾಡೂ ಎಂದರು. ಆಯಿತ್ತೆಂದೆ. ದೇವರು ನಡೆಯಿಸಿದ. ಹಳೆಯ ಸ್ಟೋಕಿಗೆ ಒಂದಕ್ಕೆ ಹತ್ತರಷ್ಟು ಬೆಲೆಯಾಗಿದೆ. ಇನ್ನೇನೂ ಹೆದರಿಕೆ ಇಲ್ಲ. ನಡೆದೀತು. ಅದಕ್ಕೇನೆ ನಮ್ಮ ಲಕ್ಷ್ಮಣನಿಗೆ ಅಂದೆ ಕಳೆದ ಸಾರಿ ರಜೆಯಲ್ಲಿ ಬಂದಾಗ—'ಯಾಕೆ ಮಿಲಿಟ್ರಿ ನೌಕರಿ ಎಂದು ಒದ್ದಾಟ ಮಾಡುತ್ತಿದ್ದೀಯಾ? ಅಂಗಡಿಯಲ್ಲಿ ಬಂದು ಕುಳಿತುಕೋ. ಇನ್ನು ಹೇಗೂ ದಿನ ಹೋದೀತು' ಅಂದೆ. ಏನೋ ಅವನ ಹಾಯಿಸು ಬೇರೆ. ದೇವರು ಅವನ ವಿಷಯದಲ್ಲಿಯೂ ಚೆನ್ನಾಗಿ ನಡೆಯಿಸಿದ್ದಾನೆ. ನಡೆಯುತ್ತದೆ. ಎಲ್ಲಾ ಮನುಷ್ಯಯತ್ನವೇ ಹೇಳಿ? ದೇವ ಕೃಪೆ.

ರಾಮು—ಬಾ, ಬಾ, ಕಾಫಿ ಕಾದಿದೆ. (ಎಂದು ಒಳಕ್ಕೆ ಕರೆದುಕೊಂಡು ಹೋಗುವನು.)

(ಅಷ್ಟರಲ್ಲಿ ತುಂಬ ಉದ್ವಿಗ್ನರಾದ ಶಂಕರರಾಯರು ಅಲ್ಲಿಗೆ ಆಗಮಿಸುವರು.)

ಶಂಕರ—ಏನು ಯಾರೂ ಇಲ್ಲವೇ? ಓ, ಒಳಗೆ ಸದ್ದು ಕೇಳಿಸುತ್ತಾ ಇದೆಯಲ್ಲಾ? ಒಳಗೆ ಹೋಗಲೇ ಯಾಕೆ? ಕಾಫಿ ಗೀಫಿ ಕುಡಿಯುತ್ತಿರಬಹುದು. ಇಲ್ಲಿಯ ತನಕ ಬಂದುದೇ ದೊಡ್ಡದು. ಮರ್ಯಾದೆ ಹೋಗುವ ಪ್ರಸಂಗ ಬಂತೂ, ಬಂದೆ. (ಅಲ್ಲಿ ಒಂದು ಕುರ್ಚಿಯಲ್ಲಿ ಕಾದು ಕುಳಿತುಕೊಳ್ಳುವರು.)

(ಸುಧಾ, ಸದಾ ಇಬ್ಬರೂ ಹೊರಕ್ಕೆ ಬರುವರು.)

ಶಂಕರ—ಸದಾ, ಇಲ್ಲೇ ಇದ್ದೀಯಾ ಇನ್ನೂ?

ಸದಾ—ಅಪ್ಪಾ ಏನು ಬಂದುಬಿಟ್ಟೆ? ಈ ಸಾಯಂಕಾಲ ನಾನು ಬರಬೇಕೆಂದಿದ್ದೆ.

ಶಂಕರ—ನನ್ನ ಕೆಲಸಕ್ಕೆ ನಾನು ಬಾರದೆ ಇನ್ನು ಯಾರು ಬರಬೇಕು?

ಸುಧಾ—ಸದಾಶಿವ ಎಲ್ಲಾ ಸಂಗತಿಯನ್ನು ಹೇಳಿದ್ದಾನೆ. ನಾನೂ ಎಲ್ಲಾ ಸಂಗತಿಯನ್ನು ಹೇಳಿದ್ದೇನೆ.

(ತೆರಳುವನು ಅವನು.)

ಶಂಕರ—ಏನು ಆಗಬಹುದೆಂದನೇ? ಅವನಿಗೆ ನನ್ನ ಎಲ್ಲಾ ತೊಂದರೆಗಳನ್ನು ವಿವರಿಸಿ ಹೇಳಿದಿಯೋ ಹೇಗೆ?

ಸದಾ—ಅದೇನು ಅವನಿಗೆ ತಿಳಿಯದ ಸಂಗತಿಯೇ? ಆದರೆ ಅವನ ಉತ್ತರ ಏನೂ ಪ್ರಯೋಜನ ಕಾಣಲಾರದು. ಅವನು ಶರ್ತದ ಮೇಲೆ ಸಹಾಯ ಮಾಡುವುದಂತೆ, ನನ್ನ ಮತ್ತು ಶ್ರೀಮತಿಯ ಲಗ್ನದ ವಿಷಯ ಕರಾರು ಹಾಕಿ

ಶಂಕರ—ಲಗ್ನದ ಕೆಲಸಕ್ಕೆ ನಿನ್ನನ್ನು ಕಳುಹಿಸಿದೆನೇ?

ಸದಾ— ಅಲ್ಲವಪ್ಪಾ, ಅವರ ಮಾತನ್ನು ಹೇಳಿದೆನಷ್ಟೆ— ನಾನು ಅವನ ನಾದಿನಿಯನ್ನು ಲಗ್ನವಾದರೆ ಶ್ರೀಮತಿಯನ್ನು ರಾಜಾರಾಮನಿಗೆ ಕೊಟ್ಟರೆ ಆಗ ಸಹಾಯ. ಸಾಲ, ಎಲ್ಲಾ ವಿಚಾರ ಮಾಡುವವರಂತೆ. ಅದಕ್ಕೆಲ್ಲ ಕೇಳಿದ ಕೂಡಲೆ ಉತ್ತರ ಹೇಳುವುದಕ್ಕೆ ಬರುತ್ತದೆಯೇ? ನಿನಗೆ ಹಣ ಬೇಕಾದುದು ಎಂದು? ಕೊನೆಗೆ ಮನೆಯನ್ನು ಅಡವು ಮಾಡಿಯೋ, ಮಾರಿಯೋ ಹಣ ಪಡೆಯಬಹುದಲ್ಲಾ? ಇವರ ಶರ್ತ ದಾನ ಯಾವುದೂ ಬೇಡವೆಂದು ಕಾಣುತ್ತದೆ.

ಶಂಕರ—ನಾನು ಕೇಳಿಬಿಡುತ್ತೇನೆ ಒಮ್ಮೆ. ಹೇಗೂ ಮರ್ಯಾದೆ ಬಿಟ್ಟು ಇಲ್ಲಿಗೆ ಬಂದಿದ್ದೇನೆ. ಆಗುವುದೆಲ್ಲ ಆಗಲಿ. ನನ್ನ ಹಣೆಯ ಬರಹದ ತೂಕ ಅವನು ಮಾಡಲಿಕ್ಕೆ ನಿಂತಿದ್ದಾದರೆ ನಾನೂ ಅವನ ತೂಕ ಮಾಡಬೇಡವೇ? (ಗಟ್ಟಿಯಾಗಿ) ಸುಧಾ, ಇಲ್ಲಿ ಬಂದು ಹೋಗು.

ಸದಾ—ಬೇಡವಪ್ಪಾ ಈಗ. ಮನೆಗೆ ಹೋಗಿ ವಿಚಾರ ಮಾಡಿ ಮಾತನಾಡುವ.

ಶಂಕರ—ಇಲ್ಲ. ನಾನು ಅವನನ್ನು ಕೇಳಬೇಕು. ನನ್ನ ಮಗ ಅವನು ನಿಜವಾದರೆ ಹೇಳಿದ್ದನ್ನು ಕೇಳಿಯಾನು. ನನ್ನ ಮರ್ಯಾದೆ ತನ್ನದೂ ಎಂದು ತಿಳಿದಾನು.

ಸದಾ—ಅಪ್ಪಾ, ನೀನು ಸಿಟ್ಟುಗೊಂಡೇ ಬಂದಿದ್ದೀ. ನಾವು ಇನ್ನೊಬ್ಬರ ಮನೆಗೆ ಬಂದು ಸಿಟ್ಟು, ಸಿಡಬು ತೋರಿಸುವುದು ಸಮವಲ್ಲ.

ಶಂಕರ—ನೀನು ಸುಮ್ಮನಿರು ಮಗೂ. ಯಾರ ತಾಳ್ಮೆಗೂ ಒಂದು ಮಿತಿ ಉಂಟು. ಈ ಎರಡೂವರೆ ವರ್ಷ ಕಾಲ ಎಲ್ಲವೂ ಸಹಿಸಿದ್ದೇನೆ.

ಮದುವೆ ಬೇಡವೆಂದ. ಇವನ ಕಾಲು ಹಿಡಿದು ಲಗ್ನ ಮಾಡಿಸಿದರೆ, ಈಗ ಮಾವ ಅಳಿಯ ಇಬ್ಬರಿಗೂ ನಾನು ಶತ್ರುವಾದೆನೇ?

ಸದಾ— ಗಟ್ಟಿ ಮಾತನಾಡಬೇಡವಪ್ಪಾ, ಯಾಕೆ ಹೀಗೆ ಮಾಡುತ್ತೀ? ಡಾಕ್ಟರು ಬರುವ ಸಮಯವಾಯಿತು.

ಶಂಕರ—ಬರಲಿ, ಬೇರೆಯವರು ಅಲ್ಲವಷ್ಟೆ. ನನ್ನ ಮರ್ಯಾದೆ ಹೋಗುವ ಕಾಲದಲ್ಲಿ ಅವರು ಸಂತೋಷ ಪಡುವುದಾದರೆ ಪಡಲಿ.... ಸುಧಾ..!

( ರಾಮರಾಯರೂ, ಶೇಷಗಿರಿ ಹೊರಕ್ಕೆ ಬರುವರು. )

ರಾಮರಾವ್— ಯಾರು? ಶಂಕರರಾಯರು! ಬನ್ನಿ. ನಮ್ಮ ಕಾಫಿ ಆಯಿತಷ್ಟೆ ಈಗ. ಎಷ್ಟು ಹೊತ್ತಾಯಿತು ಬಂದು? ಗೊತ್ತೇ ಆಗಲಿಲ್ಲ! ಸೇವಂತಿ! ನಿನ್ನ ಮಾವ ಬಂದಿದ್ದಾರೆ. ಒಂದು ಕಪ್ ಕಾಫಿ ತೆಗೆದುಕೊಂಡು ಬಾ.

ಶಂಕರ—ನಾನು ಕಾಫಿಗೆ ಬರಲಿಲ್ಲ. ಕಾಫಿ ಮನೆಯಲ್ಲಿ ಮಾಡಿ ಬಂದದ್ದು. ಸುಧಾಕರನನ್ನು ಕಾಣಲಿಕ್ಕೆ ಬಂದೆ. ಸುಧಾ ನಮ್ಮ ಮನೆಗೆ ಬರಬಾರದೂ ಎಂದು ಆಣೆ ಹಾಕಿಕೊಂಡಿರಬೇಕು. ತಂದೆಯಾದ ನಾನಾದರೂ ಅವನಿದ್ದಲ್ಲಿಗೆ ಬರಬೇಡವೇ? ಒಮ್ಮೆ ಅವನನ್ನು ಇಲ್ಲಿಗೆ ಬರಹೇಳಿ. ನಾಲ್ಕು ಮಾತು ಕೇಳುವುದಿದೆ. ನೀವೂ ಇದ್ದೀರಿ, ಕೇಳಲಿ ಬಿಡಲಿ.

ಸದಾ— ಅಪ್ಪಾ, ನೀನು ಸುಮ್ಮನಿರುವುದಿಲ್ಲವೇ?

ಶಂಕರ—ಸುಮ್ಮನಿರಬೇಕೆ? ಏತಕ್ಕೆ? ಆಗುವುದೆಲ್ಲ ಒಂದೇ ಸಾರಿಗೆ ಆಗಿಬಿಡಲಿ.

ರಾಮ—ಯಾಕೆ ಶಂಕರರಾವ್, ಗಡಿಬಿಡಿ ಸಿಟ್ಟು? ಸುಧಾ ಬರುವುದಿಲ್ಲವೆಂದನೇ? ಸುಧಾ ಇಲ್ಲಿ ಬಾ?

ಸುಧಾ—( ಬರುತ್ತಾನೆ. ) ಏನದು?

ರಾಮ—ನಿನ್ನ ತಂದೆಯವರು ಮಾತನಾಡಲು ಬಂದಿದ್ದಾರಲ್ಲಾ? ಯಾಕೆ ಹಾಗೆ ಹೋಗುತ್ತೀ? ಕುಳಿತುಕೊಂಡು ಏನೆಂದು ವಿಚಾರಿಸಬಾರದೇ?

ಸುಧಾ — ಸುಮ್ಮನೆ ಹೋದದ್ದಲ್ಲ. ಯಾಕೆ ಬಂದರೆಂಬುದು ಗೊತ್ತು. ಅದರ ವಿಷಯವನ್ನು ಸದಾಶಿವನಿಗೆ ಹೇಳಿದ್ದೇನಲ್ಲಾ. ಅವನು

ತಿಳಿಸಿಯಾದ ಮೇಲೆ ಅವರು ಮಾತನಾಡಲಿ. ಆಮೇಲೆ ಮಾತನಾಡುವಾ ಅಂತ ಈಚೆಗೆ ಬಂದೆ.

ಶಂಕರ—ಸುಧಾ, ನಿನ್ನ ಸಾಲಜೋಡು ತಿಳಿಯಿತು. ನನಗೆ ಅದು ಸಂತೋಷದ ಸಂಗತಿ ಅಲ್ಲ. ಆದರೆ ನೀನು ಆ ಶರ್ತವನ್ನು ಇರಿಸಿಕೊಂಡು ಮಾತನಾಡುವುದು ಸಮನಲ್ಲ. ನಾನು ಆ ಶರ್ತಕ್ಕೆ ಬಗ್ಗಬೇಕಾಗಿಯೂ ಇಲ್ಲ. ನಾನು ಕೇಳಲು ಬಂದುದು ಇಷ್ಟೇನೆ. ನೀನು ನಮ್ಮ ಮನೆಯ ಕಡೆಗೆ ಬರುತ್ತಲಿಲ್ಲ. ಅದಕ್ಕೂ ನಾನು ಯಾವುದೂ ಮಾತನಾಡಲಿಲ್ಲ. ನಾನೇ ನಿನ್ನನ್ನು ಕಾಣಲಿಕ್ಕೆ ಬಂದೆ. ಇಲ್ಲಿ ಬಂದು ಕುಳಿತ ಮೇಲೆ ಏತಕ್ಕೆ ಬಂದೆನೆಂದು ವಿಚಾರಿಸಬೇಡವೇ? ಇವತ್ತು ನೋಡು ನನಗೆ ಸಾಲವಾಗಿದೆ. ರಾಮರಾಯರ ಮುಂದೆ ಹೇಳಿದ ಸಂಗತಿಯಲ್ಲ. ಅದು ನಿನ್ನ ಮದುವೆಗೆ ತೆಗೆದ ಸಾಲ. ಅದು ಸಮನಾದ ಸಾಲವೂ ಅಲ್ಲ. ನನ್ನ ಕಕ್ಷಿಗಾರನ ಹಣ ಕೋರ್ಟಿನಿಂದ ಬಂದದ್ದು ನನ್ನ ಕೈಯಲ್ಲಿ ಇತ್ತು. ಆ ದಿನ ನನ್ನ ಆಪತ್ತಿಗೆ ಅದನ್ನು ಬಳಸಿಕೊಂಡೆ. ಈ ಎರಡು ವರ್ಷವೂ ಕೊಡುತ್ತೇನೆ ಎಂದು ಮುಂದೆ ತಳ್ಳುತ್ತ ಬಂದೆ. ಇನ್ನು ಅದಕ್ಕೆ ವಾಯಿದೆ ಇಲ್ಲ. ನಾಳೆಯ ದಿನ ನಾನು ಅದನ್ನು ಕೊಡದೇ ಹೋದರೆ ಕೋರ್ಟಿಗೆ ದೂರು ಕೊಡುತ್ತೇನೆ ಎಂದಿದ್ದಾನೆ. ಯಾವ ರೀತಿಯಿಂದಲೇ ಆಗಲಿ ನಾಳೆ ನಾನು ಅದನ್ನು ತುಂಬಿಸಬೇಕು. ಈ ಸಮಯದಲ್ಲಿ ನೀನು ಹೀಗೆಲ್ಲ ಮಾತನಾಡಿದರೆ ನಾನು ಏನುಮಾಡಬೇಕು. ಎರಡು ಸಾವಿರ, ಮೂರು ಸಾವಿರ ರೂಪಾಯಿ ಒಮ್ಮಿಂದೊಮ್ಮೆ ಎಲ್ಲಿಂದ ತರಲಿ? ಇಷ್ಟು ದಿವಸ ಹೇಳಿ ಕಳುಹಿಸಿದರೂ ನೀನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ನನ್ನಿಂದ ದುಡಿಯುವುದಾಗಲೀ, ಕೂಡಿಸುವುದಾಗಲೀ ಸಾಧ್ಯವಾಗಿದ್ದರೆ ನಾನು ನಿನ್ನ ಹತ್ತಿರ ಬೇಡಲಿಕ್ಕೆ ಬರುತ್ತಿರಲಿಲ್ಲ.

ಸುಧಾ— ನಾಳೆಯ ಒಳಗೆ ಎರಡು ಸಾವಿರ ನೀವು ಆಗಬೇಕೆಂದು ಹೇಳಿದರೆ ಇಪ್ಪತ್ತನಾಲ್ಕು ತಾಸಿನ ವಾಯಿದೆ ಹಾಕಿದರೆ ನಾನು ಹಣ ನಿರ್ಮಿಸುವುದೇ? ನಾನು ಹಣವನ್ನು ಒಳಗೆ ಕೂಡಿಸಿಟ್ಟವನಾದರೆ ನೀವೆನ್ನುವ ಮಾತು ಸಮ.

ಶಂಕರ—ಮಗೂ, ನನಗೆ ಮಾತು ಬೇಡ ಇದು. ನಿನ್ನಿಂದ ಆದರೆ

ಆಯಿತು ಎನ್ನು. ತಂದೆಯ ಪಾಲಿಗೆ ಸಲ್ಲುವ ಋಣ ಸ್ವಲ್ಪವಾದರೂ ಇದೆಯೆಂದು ತಿಳಿದರೆ ಒಪ್ಪು. ಇಲ್ಲವಾದರೆ ಬಿಡು.

ಸುಧಾ—ನೀನು ಹೀಗೆ ಖಂಡು ತುಂಡ ವಾಯಿದೆ ಹಾಕಿ ಹೆದರಿಸಲು ಬಂದವರ ಹಾಗೆ ಕಾಣುತ್ತದೆ. ನನ್ನಿಂದ ಕೊಡುವುದಕ್ಕೆ ಸಾಧ್ಯವೇ, ಇಲ್ಲವೇ ಎಂಬುದನ್ನಾದರೂ ಯೋಚಿಸಬೇಡವೇ? ನಿಂತ ಮೆಟ್ಟಿಗೆ ಹೇಳುವ ಮಾತೇ ಅದು? ನಾನು ನನ್ನ ಜವಾಬ್ದಾರಿ ತಿಳಿದು ಆಡಬೇಕು. ಒಂದೆ ರಡು ದಿವಸದಲ್ಲಿ ಹೇಳುತ್ತೇನೆ. ಕೊನೆಗೆ ನನ್ನಿಂದ ಆದದ್ದನ್ನು ಕೊಡು ತ್ತೇನೆ. ಈಗಲೇ ಎಷ್ಟು ಏನು ಎಂಬುದನ್ನು ಹೇಳಲಾರೆ. ನೀವು ಸದಾ ಶಿವ ಹೇಳಿದ ಸಂಗತಿಯನ್ನು ವಿಚಾರ ಮಾಡಿದರೆ ಈ ಸಿಟ್ಟು ಗಡಿಬಿಡಿ ಯಾವುದೂ ಬೇಕಾಗಿಲ್ಲ. ಮೊದಲಿನಂತೆ ಎಲ್ಲರೂ ಸಂತೋಷವಾಗಿರ ಬಹುದು.

ಶಂಕರ—ಅಂತೂ ಶರ್ತವಿಲ್ಲದೆ ನಿನ್ನ ಮಾತಿಲ್ಲ. ಬೇಡವೇ ಬೇಡ ನಿನ್ನ ಸಹಾಯದ ಮಾತು ಅದರ ಮೇಲೆ ಸಹಾಯ ಮಾಡುವ ನಂಟುತನದ ಮಾತು ಬೇಡ. ಒಂದು ಹುಡುಗಿಯನ್ನು ನಮ್ಮ ಮನೆಗೆ ತಂದ ಸುಖ ವನ್ನು ನೋಡಿದೆವಲ್ಲಾ? ಕೇಳುವ ಮಾತು ಯಾವುದಕ್ಕೂ ಕಡಿಮೆ ಯಾಗಲಿಲ್ಲ.

ರಾವ್—ಏನು ಮಾತು ಕೇಳಿದ್ದೀರಿ ಶಂಕರರಾವ್? ಎಲ್ಲಿಂದ ಎಲ್ಲಿಗೆ ಓಡುತ್ತಾ ಇದ್ದೀರಿ?

ಶಂಕರ—ಯಾಕೆ ಆದರ ಚರಿತ್ರೆ ಇಲ್ಲಿ? ಅತ್ತೆಯ ಮನೆಯಲ್ಲಿ ನಿಮ್ಮ ಮಗಳನ್ನು ಉಪವಾಸಕ್ಕೆ ಕೆಡವಿದೆವೂ ಎಂಬ ಕೀರ್ತಿ ಕಟ್ಟಿಕೊಟ್ಟಿ ದ್ದೀರಿ. ಮತ್ತೇನು ಬೇಕು? ಅದರಿಂದ ಹೆಚ್ಚಿಗೆ?

ಸದಾ—ಅಪ್ಪಾ, ನೀವು ಮನೆಗೆ ಹೋಗಬೇಕು. ಇನ್ನು ಆ ಪುರಾಣ ವೆಲ್ಲ ತೆಗೆದು ಏನಾಗಬೇಕು? ಶ್ರೀಮತಿ, ಬಾ, ಇಲ್ಲಿ. ಅಪ್ಪನನ್ನು ಮನೆಗೆ ಕರೆದುಕೊಂಡು ಹೋಗು. ನೀವೇನೂ ಮಾತನಾಡಬಾರದು ಇಲ್ಲಿ ನನ್ನಾಣೆ ಇದೆ ಹೋಗಿ. ನಾನೇ ಹೋಗಿಬರುತ್ತೇನೆ ಎಂದಿದ್ದೆನಲ್ಲಾ? ನೀವು ಯಾಕೆ ಬರಬೇಕಿತ್ತು?

ರಾಮು — ಅವರು ಇರಲಿ; ಏನೋ ಸಿಟ್ಟಿಗೆ ಮಾತನಾಡಿದರು. ಅವರಿಗೆ ಸಿಟ್ಟು ಬಂತೆಂದು ನಾವು ಸಿಟ್ಟು ಮಾಡಬೇಕಾಗಿಲ್ಲ.

ಶ್ರೀಮತಿ—(ಬಂದು).

ಶಂಕರ— ನೀನು ಯಾಕೆ ಬಂದಿದ್ದಿ ಇಲ್ಲಿ? ಬಾ ಹೋಗುವ. ನೀನೂ ಬಾ ಸದಾ. ಸಾಕು ಎಲ್ಲ ಪಂಚಾತಿಕೆ.

ಸದಾ—ನೀನು ಹೋಗು, ನಾನು ಈಗ ಬರುತ್ತೇನೆ.

ಹುಡುಗ— ( ಬಂದು ) ಸಾರ್, ಅಲ್ಲಿ ಇನ್ಸ್‌ಸ್ಪೆಕ್ಟರ್ ನಾರಾಯಣ ರಾಯರು ಮಗುವನ್ನು ಕರೆದುಕೊಂಡು ಬಂದಿದ್ದಾರೆ. ಮಗು ಏನನ್ನೋ ಮೂಗಿಗೆ ಹಾಕಿಕೊಂಡಿದೆಯಂತೆ.

ರಾಮು — ಸುಧಾ ಹೋಗು. ಬೇಡ, ನಾನೇ ಹೋಗುತ್ತೇನೆ. ( ಎಂದು ತೆರಳುವರು.)

ಸುಧಾ—ಇಲ್ಲಿ ಬಂದು ಇಷ್ಟು ರಣರಂಪ ಮಾಡುವ ಕಾರಣವಿಲ್ಲ. ಹೀಗೇ ಗದ್ದಲ ಮಾಡುವುದಕ್ಕೆ ಬಂದ ಹಾಗಿದೆ ನೀವು. ಅಲ್ಲದೆ ಈ ವರೆಗೆ ಬಾರದ ಅಪ್ಪಾ ಒಮ್ಮಿಂದೊಮ್ಮೆಗೆ ಬಂದರೆಂದರೆ? ಹೇಗಾದರೂ ಮಾಡಿ ನನ್ನ ಮರ್ಯಾದೆ ತೆಗೆಯಬೇಕೆಂಬ ಉದ್ದೇಶ. ಅದಕ್ಕೆಲ್ಲ ನಾನು ಹೆದರುತ್ತೇನೆಂದು ತಿಳಿಯಬೇಡಿ. ಇಷ್ಟೆಲ್ಲ ಗದ್ದಲ ಮಾಡಿದ ನಂತರ ನಾನು ಮೊದಲು ಹೇಳಿದ ಸೂಚನೆ ಮರೆಯುವುದು ಒಳ್ಳೆಯದು. ಒಂದು ಸ್ನೇಹ ಬಾಂಧವ್ಯ ಬೆಳೆಯಿಸುವುದಕ್ಕೆ ತಿಂಗಳು ವರ್ಷ ಪ್ರಯತ್ನ ಮಾಡಬೇಕಾಗುತ್ತದೆ. ಆದರೆ ಇದ್ದದ್ದನ್ನು ಕೆಡಿಸುವುದಕ್ಕೆ ಇಂಥ ಒಂದು ಸೀನ್ ಸಾಕು.

ಸದಾ—ಸೀನ್ ಆಗುತ್ತಿರಲಿಲ್ಲ, ಏನೂ ಆಗುತ್ತಿರಲಿಲ್ಲ. ನಿನಗೆ ಹತ್ತು ಸಾರಿ ಬರಹೇಳಿದರು. ನೀನು ಒಮ್ಮೆಯಾದರೂ ಹೋದೆಯಾ? ಏನಿದ್ದರೂ ಆಗ ಮನೆಯಲ್ಲೇ ಆಗಿಹೋಗುತ್ತಿತ್ತು. ಅವರಾದರೂ ಎಷ್ಟೆಂದು ತಾಳ್ಮೆ ತೋರಿಸಿಯಾರು? ಅದೂ ಇಷ್ಟು ಕಷ್ಟದಲ್ಲಿರುವಾಗ ನೀನು ಯಾವುದನ್ನೂ ಕಿವಿಯ ಮೇಲೆ ಹಾಕಿಕೊಳ್ಳದಿದ್ದರೆ?

ಸುಧಾ—ಇದಾದರೂ ಒಳಿತಿಗೇ ಆಯಿತು. ಎಷ್ಟೋ ಅಭಿಮಾನ ನಮ್ಮ ಮೇಲೆ ಉಂಟು ಎಂಬುದು ಗೊತ್ತಾಯಿತಲ್ಲಾ!

ಹುಡುಗ— (ಬಂದು) ಸಾರ್, ಬರಬೇಕಂತೆ ದೊಡ್ಡ ಡಾಕ್ಟರು ಕರೆಯುತ್ತಿದ್ದಾರೆ.

(ಸುಧಾ ಹೋಗುತ್ತಾನೆ.)

ಶೇಷಗಿರಿ— ಇದೇನು ಸದಾಶಿವ, ನನಗೆ ಈಗಲೇನೇ ಗೊತ್ತು ನಿಮ್ಮಲ್ಲಿ ಇಷ್ಟೆಲ್ಲ ವಿಪರೀತವಾಗಿದೆಯೆಂದು. ನಿಮ್ಮ ಅಣ್ಣ ಇಲ್ಲಿ ಬಂದು ಬಿಡಾರವನ್ನು ಮಾಡಿದ್ದೇ ಕಂಡು ಆಶ್ಚರ್ಯವಾಯಿತು. ವಯಸ್ಸಾದಾಗ, ಅವರು ಮಕ್ಕಳನ್ನು ಇಷ್ಟೆಲ್ಲ ನಂಬಿರುವಾಗ ಅವರೊಡನೆ ಹೀಗೆ ಮಾತನಾಡುವುದೇ? ಅವರು ಎಷ್ಟೆಂದರೂ ತಂದೆಯಲ್ಲವೇ? ಮೊದಲಿನಂತೆ ಅವರ ಸ್ಥಿತಿ ಇದ್ದುದಾದರೂ ಚಿಂತೆ ಇಲ್ಲ. ಈಗ ತುಂಬ ಕಷ್ಟದಲ್ಲಿ ದಾರೆಂದು ಕೇಳಿದೆ.

ಸದಾ— ಶೇಷಗಿರಿ, ತಂದೆಗಿಂತ ದೊಡ್ಡ ತಂಪೆ ಹಣ, ಐಶ್ವರ್ಯ.

ಶೇಷಗಿರಿ—ಲಕ್ಷ್ಮಣನು ನನಗೆ ನಿಮ್ಮ ಮನೆಯ ವಿಷಯ ಬರೆದಿದ್ದ. ಅದಕ್ಕೇನೆ ನಾನು ಎಂದು ಸಿಗಬೇಕೆಂದು ಕೇಳಿದ್ದು.

ಸದಾ— ಏನು ಬರೆದಿದ್ದಾನೆ? ನಾನು ಹೊರಡುವಾಗ ಅವನಿಗೆ ಸಿಕ್ಕಿದ್ದ. ಆತ ಹೊರಡುವ ಎರಡು ಮೂರು ದಿವಸದ ಮೊದಲು ಮುಂಬಯಿಗೆ ಬಂದಿದ್ದ. ನಿನಗೇನೋ ಪತ್ರ ಬರೆಯುತ್ತೇನೆ ಎಂದು ಹೇಳಿದ್ದ.

ಶೇಷಗಿರಿ— ಮತ್ತೇನಿಲ್ಲ. ನಿನ್ನಿಂದಾದರೆ ಶಂಕರರಾಯರಿಗೆ ಎರಡು ಸಾವಿರ ರೂಪಾಯಿ ಸಾಲ ಒದಗಿಸೂ ಎಂದು ಬರೆದಿದ್ದ.

ಸದಾ — ಹಾಗೆಂದು ಬರೆದಿದ್ದನೇ? ನಿನ್ನ ಒದ್ದಾಟ ನಿನಗಿರಬಹುದು. ನಮ್ಮ ಜತೆಯಲ್ಲಿ ನಿನ್ನನ್ನೂ ಎಳೆಯುವುದು ಸರಿಯಲ್ಲ. ನನಗೆ ಹೀಗೆ ಕಾಣುತ್ತೆ ಶೇಷಗಿರಿ. ನಮ್ಮ ಮನೆಯ ಜವಾಬ್ದಾರಿ ಮೇಲೆ ಒಂದು ಮೂರು ಸಾವಿರ ರೂಪಾಯಿ ಸಾಲ ಕೊಟ್ಟರೆ ಏನು? ಒಟ್ಟಾರೆ ಅಷ್ಟು ಸಾಲವಿದೆಯಂತೆ. ಆದರೆ ಅವರಿಗೆ ನಾಳೇನೆ ಎರಡು ಸಾವಿರ ಬೇಕೆಂದು ಕೇಳಿ ಗಾಬರಿ ಆಯಿತು. ಆ ವಿಷಯವನ್ನು ನನ್ನ ಹತ್ತಿರವೂ ಹೇಳಲಿಲ್ಲ. ಕಕ್ಷಿಗಾರರ ಹಣವೆಂದರೆ ಮರ್ಯಾದೆ ಹೋಗುವ ವ್ಯಾಪಾರವೇ ಸರಿ.

ಶೇಷಗಿರಿ—ನಿಜ ಸದಾಶಿವ. ಊರಲ್ಲಿಯೂ ಅಂಥ ಸುದ್ದಿ ಹಬ್ಬಿದೆ.

ಅವರು ಕಕ್ಷಿಗಾರರ ಹಣವನ್ನು ಮುಳುಗಿಸುತ್ತಾರೆಂದು ಒಬ್ಬಿಬ್ಬರು ಹೇಳಿದ್ದನ್ನು ನಾನೂ ಕೇಳಿದ್ದೇನೆ. ಆದರೆ ಇದರಿಂದೇನು ಅವರ ಹತ್ತಿರ ಬರುವ ಕುಳವಾರುಗಳ ಸಂಖ್ಯೆಯೂ ಕಡಿಮೆಯಾಗಿದೆ.

ಸದಾ—ಸ್ವಲ್ಪ ಮೊದಲಾದರೂ ತಿಳಿದಿದ್ದರೆ ಏನಾದರೂ ಪ್ರಯತ್ನ ಮಾಡಬಹುದಿತ್ತು. ನಾಳೆಯ ಒಳಗೆ ಹೇಗೆ ಮಾಡಲಿ. ಏನು ಮಾಡಿಯಾದರೂ ಅವರ ಮಾನ ಉಳಿಸಬೇಕು. ಯಾರ ಹತ್ತಿರ ಹೋದರೆ ಹಣ ಸಿಕ್ಕೀತು?.... ಕೊನೆಗೆ ಹೇಗೂ ಕಾಣುತ್ತದೆ. ಲಗ್ನಕ್ಕೆ ಒಪ್ಪಿಯಾದರೂ ಅವರ ಮರ್ಯಾದೆಯನ್ನು ಉಳಿಸುವುದು ಸಾಧ್ಯವಿದ್ದರೆ ಹಾಗೆ ಮಾಡಬೇಕೆಂದೆನಿಸುತ್ತದೆ. ಆದರೆ ನೋಡು ಶೇಷಗಿರಿ, ಅವನು ತನ್ನ ತಂಗಿಯ ಲಗ್ನದ ವಿಷಯದಲ್ಲಿಯೂ ಹಟ ಹಿಡಿದಿದ್ದಾನೆ. ಆದರೆ ಆ ವಿಷಯದಲ್ಲಿ ಅವಳನ್ನು ಒತ್ತಾಯಿಸುವುದು ಸರಿಯೆಂದು ನನಗೆ ಕಾಣುವುದಿಲ್ಲ. ಅವಳಿಗೆ ಓದುವಿಕೆಯಲ್ಲಿ ತುಂಬಾ ಇಷ್ಟ. ಓದಲೀ ಎಂದು ನನ್ನ ಮನಸ್ಸು.

ಶೇಷಗಿರಿ— ಅವರಿಗೆ ನಿಮ್ಮ ಮೇಲೆ ತಿರಸ್ಕಾರ ಇರುವಾಗ ಲಗ್ನಕ್ಕೆ ಒಪ್ಪಿಕೊಳ್ಳುವುದು ಚೆನ್ನಾಗಿ ಕಾಣುವುದಿಲ್ಲ. ಹುಡುಗಿ ಕೊಡುವವರು ಬೇರೆ ಇಲ್ಲವೇ ಅಥವಾ ಆ ಲೆಕ್ಕದಿಂದ ಹಣ ಸಹಾಯ ಮಾಡುವವರು ಯಾರೂ ಇಲ್ಲವೇ?

ಸದಾಶಿವ—ಹಾಗೆ ಹತ್ತು ಮಂದಿ ಬಂದು ಹೋಗಿದ್ದಾರೆ. ಏನೂ ಮಾಡಬಹುದಿತ್ತು. ಆದರೆ ತೀರ ಕೊನೆಯ ಗಳಿಗೆಯಲ್ಲಿ ತಿಳಿದರೆ ಏನು ಮಾಡಬೇಕು? ನಾಳೆಗೇ ಎರಡು ಸಾವಿರ ಆಗಬೇಕೆಂದರೆ? ಕಾರ್ಕಳದ ಮೋಹನರಾಯರಿಂದಲೂ ಒಂದು ಒಳ್ಳೆಯ ಸಮ್ಮಂಧ ಬಂದಿತ್ತು. ನಾನೂ ನೋಡುವ ಎಂದಿದ್ದೆ. ಅವರಿಗೂ ಸಂತೋಷವಾಗುತ್ತಿತ್ತು. ಇದನ್ನೆಲ್ಲ ನೋಡಿದ ಮೇಲೆ ನನಗೆ ಎಂಥ ಕಷ್ಟ ಬಂದರೂ ಚಿಂತೆಯಿಲ್ಲ. ಅವರ ಮಾನ ಉಳಿಸುವುದು ಕರ್ತವ್ಯ ಎಂದು ಕಾಣುತ್ತದೆ.

ಶೇಷಗಿರಿ—ಯಾಕೆ ಸದಾಶಿವ ನಿನಗೆ ಇಷ್ಟೊಂದು ಗಾಬರಿ?

ಸದಾಶಿವ—ಹಣದ ಸಂಗತಿ ಅಲ್ಲವೇ ಅದು?

ಶೇಷಗಿರಿ—ನಾಳಿನ ವಿಚಾರಕ್ಕೆ ನೀನು ಯಾವ ಯೋಚನೆಯನ್ನೂ

ಮಾಡಬೇಕಾಗಿಲ್ಲ. ಇವತ್ತು ಸಂಜೆಯೊಳಗೆ ತಪ್ಪಿದರೆ ನಾಳೆ ಕೋರ್ಟಿನ ವೇಳೆಯ ಒಳಗೆ ಎರಡು ಸಾವಿರ ನಾನು ತಂದು ಕೊಡುತ್ತೇನೆ. ನಿನ್ನ ತಂದೆ ಬೇಕಷ್ಟು ಉಪಕಾರ ಮಾಡಿದ್ದಾರೆ ನನ್ನ ಮಗನಿಗೆ. ದೇವರು ಈಗ ನನಗೆ ಅಷ್ಟು ಅನುಕೂಲತೆ ಮಾಡಿದ್ದಾನೆ. ಲಕ್ಷ್ಮಣನು ಪ್ರತಿ ತಿಂಗಳು ಸ್ವಲ್ಪ ಸ್ವಲ್ಪ ಕಳುಹಿಸುತ್ತಿದ್ದಾನೆ. ನಾನು ಅದನ್ನು ಮುಟ್ಟಿಲ್ಲ. ಹಾಗೆಯೇ ತೆಗೆದಿರಿಸಿದ್ದೇನೆ.

ಸದಾ—ನಿಜವೇ ಶೇಷಗಿರಿ ?

ಶೇಷಗಿರಿ—ಮತ್ತೆ ಚೇಷ್ಟೆಗೆ ಅನ್ನುತ್ತೇನೆಯೇ ? ಲಕ್ಷ್ಮಣ ಬರೆದುದೂ ಅದನ್ನೇ. ತತ್ಕಾಲಕ್ಕೆ ಹಣ ಭರ್ತಿ ಆಗಲು ಐನೂರು ರೂಪಾಯಿ ಸುಮಾರು ಕಡಿಮೆಯಾಗುವುದು. ಅದನ್ನು ಎಲ್ಲಿಂದಲಾದರೂ ಕೈಗಡ ತಂದು ತುಂಬಿಸಿಯೇನು. ಅಲ್ಲದೆ ಈ ಡಾಕ್ಟರರಿಂದಲೂ ಬರುವ ಹಣ ಸ್ವಲ್ಪ ಇದೆ.

ಸದಾ—ಶೇಷಗಿರಿ, ನಮ್ಮವರೇ ಆಪತ್ತಿನಲ್ಲಿ ನೆರವಾಗದ ಕಾಲಕ್ಕೆ ನೀನು ಅಷ್ಟು ಸಹಾಯ ಮಾಡುತ್ತೀಯಾ ಎಂದು ನಾನು ಎಣಿಸಿರಲಿಲ್ಲ. ತುಂಬಾ ಉಪಕಾರಿವಾಯಿತು. ನಾನೀಗ ಹೋಗಲೇ ?

ಸುಧಾ— (ಅಷ್ಟರಲ್ಲಿ ಬರುವನು.) ನಾನು ಆ ವಿಚಾರ ಯೋಚನೆ ಮಾಡಿದೆ ಮುಂದಿನ ಪ್ರಸಂಗ ಹೇಗೂ ಇರಲಿ. ಈಗ ಸದ್ಯಕ್ಕೆ ಬಂದ ತೊಡಕನ್ನು ನಿವಾರಿಸಬೇಕಲ್ಲಾ ? ಮಾವನನ್ನು ಕೇಳಿ ನಾಳೆಗೆ ಎರಡು ಸಾವಿರ ರೂಪಾಯಿ ಕೊಡಿಸುತ್ತೇನೆ. ಅವರ ಹತ್ತಿರವೂ ನಗದು ಇರಲಾರದು. ಆದರೆ ಎಲ್ಲಿಂದಾದರೂ ತಂದು ಕೊಟ್ಟಾರು. ಒಂದು ಮಾತ್ರ ಅವರಿಗೆ ಹಣಕ್ಕೆ ನೋಟು ಬರೆದು ಕೊಡಬೇಕಾದೀತು. ಹೋಗಿ ಹೇಳು.

ಸದಾ—ಹೂಂ.

ಸುಧಾ— ಯಾಕೆ ನಿಂತಿದ್ದೀಯಾ! ಹೋಗು ಹೋಗು. ಅವರು ಇಲ್ಲಿ ಬಂದು ಬೀದಿರಂಪ ಮಾಡಿ ಹೋದರು. ನಾವಾದರೂ ಸ್ವಲ್ಪ ಯೋಚನೆ ಮಾಡಬೇಕಲ್ಲಾ. ನಮ್ಮವರ ಮರ್ಯಾದೆ ನಮ್ಮದೇ ಅಲ್ಲವೇ ?

ಸದಾ—ಅಷ್ಟು ದಯೆಯಿದ್ದರೆ ಸಾಕು.

ಸುಧಾ—ಅಂದರೆ? ನಾನು ಜೇಷ್ಟೆಗೆ ಅಂದೆನೆಂದು ತಿಳಿದೀಯಾ?

ಸದಾ—ಆ ದಯೆ ಬೇಡ ಎಂದು ತೋರಿತು. ಇನ್ನು ನೀನು ಹಣ ಕೊಟ್ಟರೂ ಗೌರವವಿಲ್ಲ. ನಾವು ಕೊಂಡರೂ ಗೌರವವಿಲ್ಲ. ತಂದೆಯು ಮೇಲೆ ಮರ್ಯಾದೆ ಇದ್ದು ಹಣ ಕೊಟ್ಟಿದ್ದರೆ ಆ ಮಾತು ಬೇರೆ ಇತ್ತು. ಅವರು ಇಷ್ಟೆಲ್ಲ ನಿನ್ನ ಮುಂದೆ ಬಂದು ಹೇಳಿಕೊಳ್ಳಬೇಕಾಯಿತು. ನೀನು ಮನೆಯ ವಿಷಯದಲ್ಲಿ ಎಷ್ಟು ಗೌರವ ಇರಿಸಿಕೊಂಡಿದ್ದೀ ಎಂಬುದನ್ನು ಕೇಳಿದ್ದೆ. ಈಗ ಪ್ರತ್ಯಕ್ಷ ಕಂಡ ಹಾಗೇ ಆಯಿತು.

ಸುಧಾ—ಹಾಗಿದ್ದರೆ ಹಣದ ಅಡಚಣೆ ಹೇಳಿ, ಒಂದು ನಾಟಕ ಮಾಡಿ ನನ್ನನ್ನು ಪರೀಕ್ಷಿಸಲು ಬಂದವರಲ್ಲವೇ ನೀವು? ನನಗೆ ಗೊತ್ತು. ಅವರಿಗೆ ಹಣದ ಅಗತ್ಯ ಎಷ್ಟು ಇದ್ದೀತು ಏನು ಎಂದು. ನಮ್ಮ ಎದುರಿಗೆ ಸೋಗು ಹಾಕಿ ನೀವು ಪಾರ್ಟಿ ಮಾಡಲು ಕಲಿತರೆ ನನಗೂ ತಿಳಿಯುತ್ತದೆ. ಅದೇ ಸೋಗು ನಾವು ತೋರಿಸಬಲ್ಲೆವು.

ಸದಾ—ಅಣ್ಣಾ, ನಾಟಕ ನಿಜವಾದದ್ದು ನಿನ್ನದು. ತಂದೆಯವರದಲ್ಲ, ನನ್ನದಲ್ಲ. ಅವರ ಸಾಲವಾಗಲೀ, ನಾಳಿನ ವಾಯಿದೆ ಆಗಲೀ ನಾಟಕವಲ್ಲ. ನಾಳೆ ಮರ್ಯಾದೆ ಹೋಗುವುದಾದರೆ, ಆ ಯೋಗವಿದ್ದರೆ ಅದು ಒಂದು ಕಡೆಯೇ ಹೋಗಲಿ. ನಿನ್ನ ಹಂಗಿಸುವಿಕೆ, ಕರಾರು, ನೋಟು ಇವುಗಳಿಂದಲೂ ಹೋಗಬೇಕಾಗಿಲ್ಲ. ಆಯಿತು ಹೋಗುತ್ತೇನೆ. (ತೆರಳುವನು).

ಸುಧಾ—ನೋಡಿದಿಯಾ ಶೇಷಗಿರಿ, ನೀನು ಇದ್ದೆಯಲ್ಲಾ? ನಮ್ಮ ಅಪ್ಪನ ರೀತಿ, ತಮ್ಮನ ಮಾತು ಎಲ್ಲವನ್ನೂ ಕಂಡು ಕೇಳಿದಿಯಲ್ಲಾ. ಇವರ ಮನೆಗೆ ಬಂದು ಇಷ್ಟೆಲ್ಲ ಮನಃಕಷಾಯ ಚೆಲ್ಲುವ ಕಾರಣವೇನಿತ್ತು ಹೇಳು? ಸಮಾಧಾನದ ಮಾತುಗಳನ್ನಾಡಿ ನಾವು ಅಂದ ನಾಲ್ಕು ಮಾತು ಕೇಳಿದ್ದರೆ ಈ ಗೊಂದಲ ಇರುತ್ತಿತ್ತೇ?

ಶೇಷಗಿರಿ— ಹೋಗಲಿ ಡಾಕ್ಟರೇ, ಅದನ್ನೆಲ್ಲ ಮರೆತುಬಿಡಬೇಕು.

# ನಾಲ್ಕನೆಯ ಅಂಕ

(ಶಂಕರರಾಯರ ಮನೆಯಲ್ಲಿ. ಇನ್ನೂ ಒಂದು ವರ್ಷ ಕಾಲದ ನಂತರ.)

ವಸಂತಿ—ಶ್ರೀಮತೀ ಇಂಟರ್ ಆದುದು ಸಾಲದೇ? ಇನ್ನು ಬಿ.ಎ. ಕಲಿಯುವ ಹಟ ಹಿಡಿದರೆ ಹೇಗೆ? ಚಿದಾನಂದನ ಬಿ. ಎ. ಮಾಡಿಸುವುದಕ್ಕೇನೆ ಇಷ್ಟು ಕಷ್ಟವಾಯಿತು. ಸದಾಶಿವ ಏನೊ ಕಳುಹಿಸುತ್ತಿದ್ದುದ್ದಕ್ಕೆ ಆಯಿತು. ನಿನ್ನ ಈ ವರ್ಷದ ವಿದ್ಯೆ ಮುಗಿಯುವುದಕ್ಕೆ ಅವರು ತಿರುಗಿ ಸಾಲ ಮಾಡಬೇಕಾಯಿತು. ಈಗ ಹಣ ಸಾಲದ ಬಡ್ಡಿಯೆಂದು ಸಾಕಷ್ಟು ಆಗುತ್ತದೆ. ಅದನ್ನು ತೀರಿಸುವ ದಾರಿಯೂ ಕಾಣಿಸುತ್ತಲಿಲ್ಲ. ಇವತ್ತೀನೋ ಸದಾಶಿವ ಸಹಾಯ ಮಾಡುತ್ತಿದ್ದಾನೆ. ನಾಳೆ ಅವನಿಗೆ ಲಗ್ನವಾಗಿ ಪರವೂರಿನಲ್ಲಿ ಹೋಗಿ ನಿಂತರೆ ಏನೂ ಉಳಿತಾಯವಾಗದು. ತಂದೆ ದುಡಿಯುವುದು ಮನೆಯ ಖರ್ಚಿಗೇನೇ ಬರುವುದಿಲ್ಲ. ಕಳೆದ ವರ್ಷದ ಕತೆಯೆಲ್ಲ ನಿನಗೆ ಗೊತ್ತು. ಶೇಷಗಿರಿಯಿಂದಲೂ ಸಾಲ ಮಾಡಬೇಕಾಗಿ ಬಂತು. ಅಲ್ಲಿಂದಲ್ಲಿಗೆ, ಇಲ್ಲಿಂದಲ್ಲಿಗೆ ತುಂಬಿಸಿ ಹೀಗೆ ಎಷ್ಟು ದಿವಸ ಕಳೆಯಬಹುದು?

ಶ್ರೀಮತಿ— ನನಗೆ ಈಗ ನೀವು ಲಗ್ನ ಮಾಡಿಸಿದ್ದರೆ ಎರಡು ಸಾವಿರ ರೂಪಾಯಿಯಾದರೂ ಬೇಕಾಗುತ್ತಿರಲಿಲ್ಲವೇ? ಆ ಹಣವನ್ನೇ ವಿದ್ಯೆಗೆ ಕೊಟ್ಟೀರಿ ಎಂದು ತಿಳಿದಿರು. ನನಗೆ ಲಗ್ನ ಮಾಡಿಸುವುದು ಬೇಡ. ಓದಿ ನನ್ನ ಜೀವನಕ್ಕೆ ಒಂದು ದಾರಿ ಮಾಡಿಕೊಳ್ಳುತ್ತಿದ್ದೇನೆ.

ವಸಂತಿ—ಇದೇನು ಮಾತು ಮಗು! ನಾವಿಬ್ಬರೂ ಬದುಕಿರುವಾಗ ನೀನು ನೌಕರಿ ಮಾಡಿ ಹಣ ಸಂಪಾದಿಸಬೇಕೇ? ಅದೂ ಲಗ್ನದ ಯೋಚನೆಯನ್ನು ಬಿಟ್ಟು?

ಶ್ರೀಮತಿ — ನನ್ನ ಜೀವನವನ್ನು ನಾನು ನಡೆಯಿಸಿದರೆ ಬೇರೆ ಯಾರಿಗೂ ಹೊರೆಯಾಗಲಾರೆನಲ್ಲ.

ವಸಂತಿ —ನೀನು ನಮಗೆ ಹೊರೆಯೆಂದು ಯಾಕೆ ತಿಳಿಯಬೇಕು? ನಿನ್ನನ್ನು ಉದ್ಯೋಗಕ್ಕೆ ಕಳುಹಿಸಿದರೆ ಊರವರು ಏನೆಂದಾರು? ತಂದೆಗೆ

ಇದ್ದ ಒಬ್ಬ ಮಗಳನ್ನು ಸಾಕಲು ಬರಲಿಲ್ಲಾ ಎಂದು ಹೇಳಬೇಕೇ? ನೆಂಟಸ್ತಿಕೆಯು ಬಂದಾಗ ಬಿಟ್ಟು ಬಿಟ್ಟು ದುಡಿಯುವುದಕ್ಕೆ ಕುಳಿತಿರ ಬೇಕೇ? ಈಗಲೇನೇ ಒಂದು ನೆಂಟರ ಮನೆಯವರು ಚೇಷ್ಟೆ ಮಾಡುತ್ತಿ ರುವುದು ಸಾಕು.

ಶ್ರೀಮತಿ—ನೀನು ಸೇವಂತಿ ಮಾತು ಕೇಳಿ ಅಂಜಿದ್ದೀ ಕಾಣುತ್ತದೆ. ನಾನು ಇಂಟರ್ ಆದದ್ದೇ ಅವಳ ಅಸೂಯೆಗೆ ಕಾರಣವಾಗಿದೆ. ನಾನು ಬಿ. ಎ. ಕಲಿಯುತ್ತೇನೆ ಎಂಬುದನ್ನು ಕೇಳಿ ಅವಳು ಏನೇನೊ ಅಂದಿರ ಬಹುದು. ಆದರೆ ಅವರ ಹೊಟ್ಟೆಕಿಚ್ಚಿನ ಮಾತುಗಳನ್ನು ಕೇಳಿ ನಾನು ವಿದ್ಯೆ ಬಿಡುವುದಕ್ಕೆ ಆಗುತ್ತದೆಯೇ? ಎಷ್ಟು ಜನ ಈಗ ಓದಿ ಸ್ವತಂತ್ರ ಜೀವನ ಸಾಗಿಸುತ್ತ ಇಲ್ಲಾ? ನಾನು ಒಬ್ಬಳೇ ಏನು ಹೊಸತು? ಮೊದಲು ನನ್ನ ಜೀವನ ನನಗೆ ಸಾಗಿಸಬೇಕು. ಯಾರಿಗೂ ಹೊರೆಯಾಗಬಾರದು.

ವಸಂತಿ—ನೀನು ಹೊರೆಯೆಂದು ಯಾರು ಹೇಳಿದ್ದು ?

ಶ್ರೀಮತಿ—ಯಾರು ಹೇಳುವುದೂ ಬೇಡ, ನನಗೆ ತಿಳಿಯುತ್ತದೆ. ತಂದೆಗೆ ಮೊದಲಿನ ಸಂಪಾದನೆ ಇಲ್ಲಾ ಎಂದು ನನಗೆ ಕಾಣಿಸುವುದಿಲ್ಲವೇ? ಹೀಗಿರುವಾಗ ನನಗೂ ಗಳಿಸುವ ಶಕ್ತಿ ಬಂದರೆ ಮನೆಗೆ ಸ್ವಲ್ಪ ಸಹಾಯ ವಾದೇನಲ್ಲಾ ?

ವಸಂತಿ—ಮಗೂ ನೀನು ದುಡಿದು ನಮಗೆ ಕೊಡಬೇಕಾಗಿ ಇಲ್ಲ. ಬದಲು ನೀನು ವಿವಾಹಕ್ಕೆ ಒಪ್ಪಿದರೆ ಅದಕ್ಕಿಂತ ದೊಡ್ಡ ಸಂತೋಷ ಇನ್ನೊಂದಿಲ್ಲ. ಈ ಹಟ ನೀನು ಹಿಡಿಯುವುದು ಸಮನಲ್ಲ. ನಾನು ಹೇಳಿದ ಹುಡುಗ ನಿನಗೆ ಆಗದೇ ಹೋದರೆ ನೀನು ಹೇಳಿದವರನ್ನು ಲಗ್ನ ಮಾಡಿಸುತ್ತೇವೆ ನಮಗೆ ಏನಾಗಬೇಕು? ನೀನು ಸುಖವಾಗಿರಬೇಕೆಂದ ಲ್ಲವೇ ನಾವು ಯೋಚಿಸುವುದು? ಬದಲು ನಿನ್ನಿಂದ ಸಹಾಯ ಅಪೇಕ್ಷಿಸು ತ್ತೇವೆಯೇ? ಅದರಲ್ಲಿ ತಂದೆಯ ಮುಂದೆ! ಈಗ ಬಿ.ಎ. ಕಲಿಯುವ ಹಟ ಹಿಡಿಯಬೇಡ. ಅವರಿಗೆ ಕಲಿಸುವ ಇಚ್ಛೆ ತುಂಬಾ ಇದೆ. ಸದಾಶಿವನೂ ಹೇಳಿದ್ದಾನೆ. ಆದರೆ ಕಲಿಸುವುದಕ್ಕೆ ಹೋದರೆ ಇನ್ನೂ ಇನ್ನೂ ಸಾಲವೇ ಗತಿ.

ಶ್ರೀಮತಿ—ನನಗಾಗಿ ಸಾಲ ಮಾಡುವುದು ಬೇಡ.

ವಸಂತಿ—ಹಾಗಿದ್ದರೆ ಚಿದಾನಂದನಿಗೆ ಎಂಜಿನಿಯರಿಂಗಿಗೆ ಕಳುಹಿ

ಸುವುದು ಬಿಟ್ಟು, ನಿನ್ನನ್ನು ಕಾಲೇಜಿಗೆ ಕಳುಹಿಸಬೇಕು. ಅದಕ್ಕೆ ಹಣ ಕೊಡುತ್ತಿರುವವನು ನಿನ್ನ ಅಣ್ಣ. ಹಾಗೆ ಹುಡುಗರ ವಿದ್ಯಾಭ್ಯಾಸ ನಿಲ್ಲಿಸಿ ನಿನಗೆ ಬಿ. ಎ. ಮಾಡಿಸಬೇಕೇ? ಸದಾಶಿವನ ವಿಚಾರವನ್ನೇ ಎಣಿಸು. ತಂದೆಯ ಕಷ್ಟ ನೋಡಲಾರದೆ ವಿದ್ಯೆ ಅಲ್ಲಿಗೇ ನಿಲ್ಲಿಸಿ ನೌಕರಿ ಸೇರ ಬೇಕಾಯಿತು. ತನ್ನದು ಹಾಗಾಯಿತು. ಚಿದಾನಂದನ ವಿದ್ಯೆ ಅರ್ಧ ಆಗ ಬಾರದೂ ಎಂದು ಅವನ ಯೋಚನೆ.

ಶ್ರೀಮತಿ—ಚಿದಾನಂದನ ವಿದ್ಯೆ ನಿಲ್ಲಿಸಿ ನನ್ನ ವಿದ್ಯೆ ಮುಂದರಿಸ ಬೇಕೆಂದು ನಾನು ಹೇಳುವುದಿಲ್ಲ. ನಾಳೆ ಅವನಿಗೆ ದೊಡ್ಡ ಕೆಲಸವಾದರೆ ಮನೆಗೆ ಏನಾದರೂ ಸಹಾಯ ಮಾಡಿಯಾನು. ಯಾರೂ ದೊಡ್ಡಣ್ಣನ ಹಾಗೆ ಮಾಡಲಿಕ್ಕಿಲ್ಲ.

ವಸಂತಿ— ಅದು ಹೇಗೆ ಹೇಳಲಿ ಮಗೂ? ಸುಧಾ ಹೀಗೆ ಮಾಡಿ ಯಾನು ಎಂದು ಯಾರು ತಿಳಿದಿದ್ದರು? ಅವರೂ ನಾನೂ ಅವನನ್ನು ಎಷ್ಟು ನಂಬಿ ಇರಲಿಲ್ಲ? ಡಾಕ್ಟರ ಸಮ್ಮಂಧ ಮಾಡಿದ್ದೇ ಆ ಆಶೆಯಿಂದ. ಅದೇನೇ ನಮ್ಮ ಮೃತ್ಯು ಆಯಿತು. ಇವನೂ ಹಾಗೆಯೇ ನಾಳೆ. ಈಗ ಚೆನ್ನಾಗಿದ್ದಾನೆ. ನಾಳೆ ಮದುವೆಯಾಗಿ ಹೆಂಡತಿ ಮನೆಗೆ ಬಂದರೆ ಏನು ಮಾಡುತ್ತಾನೆಂದು ಹೇಗೆ ಹೇಳಲಿ?

ಶ್ರೀಮತಿ—ಛೀ, ಚಿದಾನಂದ ಎಂದೂ ಹಾಗೆ ಮಾಡಲಾರ. ತಂದೆಗೆ ಅಷ್ಟೊಂದು ಕಷ್ಟವಾದರೆ ತಾನೂ ಕಲಿಯುವುದನ್ನು ಬಿಟ್ಟು, ಮುಂಬ ಯಿಗೆ ಹೋಗುತ್ತೇನೆ ಎಂದಿದ್ದಾನೆ ಆತ. ದೊಡ್ಡ ಅಣ್ಣನ ಹಾಗೆ ಎಂದೂ ಮಾಡಲಾರ. ದೊಡ್ಡ ಅಣ್ಣನೂ ಹಾಗೆ ಮಾಡುತ್ತಿರಲಿಲ್ಲ. ಸುಲೋಚನಾ ಬಾಯಿ, ಸೇವಂತಿ ಅವರಿಗೆ ಏನೇನೋ ಹೇಳಿರಬೇಕು. ಅವರ ಮಾತು ಕೇಳಿ ಹೀಗೆಲ್ಲಾ ಆದದ್ದು. ಅವರಿಗೆ ಅವರ ಸುಖ ಸ್ವಾರ್ಥ ಬೇಕಿತ್ತು. ಇನ್ನೊಬ್ಬರ ಪ್ರಪಂಚ ತಲೆಕೆಳಗಾದರೆ ಅವರಿಗೆ ಏನು?

ವಸಂತಿ—ಆ ವಿಚಾರವನ್ನು ಬಿಡು. ಈಗ ನೀನೇನು ಮಾಡುತ್ತೀ ಹೇಳು?

ಶ್ರೀಮತಿ—ಕಾಲೇಜಿಗೆ ಹೋಗುವುದು ಬೇಡವಾದರೆ ಬೇಡ. ಆದರೆ

ಮನೆಯಲ್ಲಿ ಸುಮ್ಮನೆ ಕುಳಿತಿರಲಾರೆ. ಅಣ್ಣ ಮುಂಬಯಿಯಲ್ಲಿ ಇದ್ದಾನಲ್ಲಾ? ಅಲ್ಲಿಗೆ ಹೋಗುತ್ತೇನೆ ಏನಾದರೂ ಕೆಲಸ ದೊರಕಿಸಿಕೊಳ್ಳುತ್ತೇನೆ.

ವಸಂತಿ—ಏನು ಬಂತು ಹಾಗೆ ಮಾಡಿದರೆ? ನಿನ್ನೊಬ್ಬಳನ್ನು ಇಲ್ಲಿ ಸಾಕಲಾರೆವೇ?

ಶ್ರೀಮತಿ—ಅಷ್ಟು ಕಷ್ಟವಾದರೂ ತಪ್ಪಿತಲ್ಲಾ ನಿಮಗೆ?

ವಸಂತಿ—ಮನೆಯಲ್ಲಿ ಇದ್ದ ಒಬ್ಬಳಿಗೆ ಎಷ್ಟು ಕಷ್ಟವಾದರೂ ಅನ್ನ ಹಾಕಲಾರೆವೇ? ನಿನ್ನನ್ನು ಹೊರಗೆ ಕಳುಹಿಸಿ ಕೊಟ್ಟಲ್ಲಿ ಜನ, ನಾವೆಷ್ಟು ಗತಿಗೇಡಿಗಳೆಂದು ತಿಳಿಯಲಾರರೇ?

ಶ್ರೀಮತಿ—ಯಾಕೆ ತಿಳಿಯಬೇಕು? ನಮ್ಮ ಊರಿನಿಂದ ಎಷ್ಟೋ ಮಂದಿ ಕಲಿತ ಹುಡುಗಿಯರು ಮುಂಬಯಿಯಲ್ಲಿ ಕೆಲಸ ಸಂಪಾದಿಸಿಕೊಂಡಿಲ್ಲವೇ?

ವಸಂತಿ—ಕೆಲಸ ಸಂಪಾದಿಸಿದ್ದು ನಿಜ. ಮದುವೆಯಾಗುವ ತನಕ ಏನಾದರೂ ಒಂದು ಉದ್ಯೋಗವಿರಲೀ ಎಂದು ಹಾಗೆ ಮಾಡುತ್ತಾರೆ. ಆದರೆ ಮದುವೆಯಾಗುವವರು ತೀರ ಕಡಿಮೆ. ಮದುವೆ ಬೇಕೆಂದು ತೋರಿದಾಗ ಪ್ರಾಯ ಮೀರಿ ಇರುತ್ತದೆ. ಅಮೇಲೆ ಯಾವ ಜಾತಿಯವರಾದರೂ ಸರಿಯೇ. ಅವರ ಕೈಹಿಡಿದು ಜೀವನದ ಒದ್ದಾಟ ನಡೆಯಿಸುತ್ತಾರೆ. ನಿನಗೆ ಸದಾಶಿವ ಏನೂ ಬರೆಯಲಿಲ್ಲವೇ? ಬರೆಯುತ್ತೇನೆಂದಿದ್ದನಲ್ಲಾ?

ಶ್ರೀಮತಿ—ಯಾವ ವಿಷಯದಲ್ಲಿ?

ವಸಂತಿ—ಅದೇ ಲಗ್ನದ ವಿಚಾರದಲ್ಲಿ.

ಶ್ರೀಮತಿ—ಅದರ ಮಾತು ಎತ್ತಬೇಡಮ್ಮಾ! ನನಗೇಕೆ ದುಃಖ ಬರುವ ಹಾಗೆ ಮಾಡುತ್ತೀ?

ವಸಂತಿ—ಇಲ್ಲ ಶ್ರೀಮತಿ. ನಿನಗೆ ಲಕ್ಷ್ಮಣನನ್ನೇ ಮದುವೆಯಾಗುವ ಆಸೆ ಇದ್ದರೆ ಹಾಗೆಯೇ ಆಗಲಿ. ಅವನೇನು ಪರಜಾತಿಯವನಲ್ಲ. ನನಗೆ ಮೊದಲು ಹೇಗೋ ಕಂಡಿತು ನಿಜ. ಸದಾಶಿವನೂ ಆ ವಿಷಯ ತುಂಬ ಹೇಳಿದ್ದಾನೆ. ಒಂದು ರೀತಿಯಿಂದ ಅವನ ಮಾತು ಸಮನೇ. ಸೌಕರ

ಮಾಡಿಕೊಂಡು ಯಾವುದೋ ಊರು ಸೇರಿ, ಯಾರ ಯಾರ ಕೈ ಹಿಡಿಯುವ ಬವಲು ಅದೇನೇ ಆಗಬಹುದು. ಅವನು ಗುಣವಂತನೂ ಅಹುದು. ಅವನು ಬಡವ. ಅವನ ಮನೆತನ ಕಡಿಮೆ ಎಂದಿತ್ತು. ಆದರೆ ಇವತ್ತು ಶೇಷಗಿರಿ ಕೈಯಲ್ಲಿಯೂ ಸ್ವಲ್ಪ ದುಡ್ಡಾಗಿದೆಯಲ್ಲಾ ?

ಶ್ರೀಮತಿ — ಹೌದಮ್ಮಾ. ಅಪ್ಪನಿಗೇನೇ ಸಾಲ ಕೊಟ್ಟಿದ್ದಾನೆ. ಆಪತ್ತಿನಲ್ಲಿ ಅವ ನಮಗೆ ಬೇಕಾದ. ಆದರೆ ಆ ದಿನ ಅವನ ಮಗ ಮನೆಗೆ ಬಂದರೆ ಊಟಕ್ಕೆ ನಿಲ್ಲೂ ಅನ್ನುವ ಬಾಯಿ ಯಾರಿಗೂ ಬರಲಿಲ್ಲ.

ವಸಂತಿ—ಯಾವ ದಿನ ಅನ್ನುತ್ತೀಯಾ ?

ಶ್ರೀಮತಿ— ಅಣ್ಣನ ಲಗ್ನದ ನಿಶ್ಚಯಕ್ಕೆ ಬಂದ ದಿವಸ. ಜೀವ ಹೋದರೂ ನಾನು ಮರೆಯಲಾರದ ಸಂಗತಿ ಅದು. ಬೆಳಗಿನಿಂದ ಮಧ್ಯಾಹ್ನ ಎರಡು ಗಂಟೆಯ ತನಕ ಅವನನ್ನು ಕುಣಿಸಿ ಮನೆಯಲ್ಲಿ ವಿಶೇಷದ ಊಟ ಇದ್ದರೂ ನಿಲ್ಲು ಎಂದು ಹೇಳಿದವರಿಲ್ಲ.

ವಸಂತಿ— ಆ ತಪ್ಪು ನನ್ನದು. ಆ ದಿನ ನಿನ್ನ ಅಣ್ಣ ಏನೇನೊ ನನ್ನ ಕಿವಿಯಲ್ಲಿ ಚಾಡಿ ಬೀಸಿದ. ಅವನ ಮೇಲೆ ಸಿಟ್ಟು ಬರುವ ಹಾಗೆ ಮಾಡಿದ್ದ. ಅವನು ಹೇಳಿದುದನ್ನು ಕೇಳಿ ನನಗೂ ಹೆದರಿಕೆ ಆಯಿತು. ಎಲ್ಲಾದರೂ ಕೆಟ್ಟ ಹೆಸರು ಬರುತ್ತದೆಯೋ ಎಂದು ಅಂಜಿದೆವು.

ಶ್ರೀಮತಿ—ಹಾಗಿದ್ದರೆ ಯಾವ ಬಾಯಿಯಿಂದ ಅವನನ್ನು ಲಗ್ನವಾಗುತ್ತೀಯಾ ಎಂದು ಕೇಳುವವರು ನೀವು ?

ವಸಂತಿ— ಒಮ್ಮೆ ತಪ್ಪು ಮಾಡಿದರೆ ಕೊನೆಯ ವರೆಗೂ ತಪ್ಪೆಂದು ತಿಳಿಯಬೇಕೆ ? ಕಳೆದ ವರ್ಷ ಸದಾಶಿವ ಬಂದಾಗ ಅವನನ್ನು ಊಟಕ್ಕೆ ಕರೆಯಲಿಲ್ಲವೇ ?

ಶ್ರೀಮತಿ— ಹೌದು, ಅಣ್ಣನ ಒತ್ತಾಯಕ್ಕೆ ಕರೆದಿರಿ. ನೀನು ಅವನನ್ನು ಮಾತನಾಡಿಸಿದ್ದು ಅಷ್ಟರಲ್ಲಿಯೇ ಇದೆ. ಅಣ್ಣನ ದಾಕ್ಷಿಣ್ಯಕ್ಕೆ ಅವನು ಬಂದು ಹೋದ.

ವಸಂತಿ— ಹೌದೆಂದೇ ತಿಳಿಯುವ. ಲಕ್ಷ್ಮಣನನ್ನು ಇನ್ನೊಮ್ಮೆ ಖರಮಾಡಿಕೊಂಡು ನನ್ನಿಂದ ತಪ್ಪಾಯಿತೆಂದರೆ ನಿನಗೆ ಸಮಾಧಾನವೇ ?

ಏನೊ ತಪ್ಪು ತಿಳಿದು ಬರಬೇಡಾ ಅಂದೆ. ತಪ್ಪಾಯಿತೂ ಅಂದೆ. ತಪ್ಪಾಯಿತೂ ಅಂದರೆ ಕ್ಷಮೆಯಷ್ಟೆ ?

ಶ್ರೀಮತಿ—ಅವನೀಗ ಎಲ್ಲಿದ್ದಾನೆಂದು ನೀವು ಮಾತನಾಡಿಸುತ್ತೀರಿ? ಅವನು ಮನೆಗೆ ಬಂದು ಹೋಗುತ್ತಿದ್ದಾಗ ನೀವಲ್ಲದೆ ಹೋದರೆ ನಾನಾದರೂ ಕೇಳುತ್ತಿದ್ದೆ. ನಿಮಗೆನಿಸಿತು — ನಾನು ಅವನ ಹಿಂದೆ ಓಡಿ ಹೋಗಬಹುದೆಂದು. ನನ್ನ ಮನಸ್ಸಿನಲ್ಲಿ ಆಗ ಇಷ್ಟೆಷ್ಟು ಮದುವೆ ಯೋಚನೆ ಇರಲಿಲ್ಲ. ನೀವು ಅವನನ್ನು ಕಂಡ ಬಗೆಯನ್ನು ನೋಡಿಯೇ ಅವನನ್ನು ಲಗ್ನವಾಗಬೇಕೆಂಬ ಆಸೆ ಉಂಟಾಯಿತು.

ವಸಂತಿ—ನಿಜ; ಅದನ್ನೆಲ್ಲ ಸದಾಶಿವ ಹೇಳದ. ನೀನು ಅವನಿಗೆ ಪತ್ರ ಬರೆದರೂ ಸರಿಯೇ. ಅವನು ಬಂದು ಮಾತನಾಡಿ ಹೋದಾನು.

ಶ್ರೀಮತಿ— ನಾನು ಬರೆಯುವುದೇ? ಏನೆಂದು? ಅವನಿಗೆ ನನ್ನ ಮೇಲೆ ಪ್ರೀತಿ ಇದೆ. ದ್ವೇಷವಿಲ್ಲ ನಿಜ. ಆದರೆ ಇಷ್ಟೆಲ್ಲ ನಡೆದು ಮೂರು ವರ್ಷದ ಮೇಲಾಯಿತು. ಅವನು ಮನೆಗೆ ಬಂದು ಹೋಗಿಯೇ ಎರಡು ವರ್ಷವಾಯಿತು. ಇಲ್ಲಿನ ಸಮ್ಮಂಧವನ್ನು ಅವನು ಎಣಿಸಿಯೂ ಇರಲಾರ.

ವಸಂತಿ—ಆದರೆ ನಿನ್ನ ಮನಸ್ಸಿನಲ್ಲಿ ಅವನೇ ಬೇಕೆಂದಿದೆಯೇ?

ಶ್ರೀಮತಿ—ಆದರೆ ಅವನೇ ಆಗಬೇಕು. ಇಲ್ಲವಾದರೆ ಮದುವೆಯೇ ಬೇಡ.

ವಸಂತಿ—ಹಾಗೆ ಹೇಳುವುದೂ ನೀನು. ಇಷ್ಟರಲ್ಲಿ ಅವನು ಬೇರೆ ಸಮ್ಮಂಧ ನೋಡಿರಬಹುದು ಎಂದು ಅನುಮಾನಿಸುವವಳೂ ನೀನು. ನೀನೊಮ್ಮೆ ಬರೆದು ನೋಡು.

ಶ್ರೀಮತಿ—ನಾನೇನು ಮಾಡುವುದು? ನನಗೇ ತಿಳಿಯದು. ನನ್ನ ಮನಸ್ಸಿನಲ್ಲಿ ಏನಿತ್ತೆಂದೂ ಹೇಳುವ ಹಾಗೆ ಇದ್ದಿದ್ದರೆ ಇಷ್ಟು ಕಷ್ಟವಿರಲಿಲ್ಲ. ನನ್ನನ್ನು ಎಲ್ಲಿಗಾದರೂ ಕರಕೊಂಡು ಹೋಗು ಅಂದಿದ್ದರೆ ಅವನು ಎಂಥ ನಿಷ್ಠುರ ಬಂದಿದ್ದರೂ, ನನ್ನ ಮೇಲಿನ ಪ್ರೀತಿಯಿಂದ ಅಲ್ಲವೆನ್ನುತ್ತಿರಲಿಲ್ಲ. ಈಗ ಹೇಳುತ್ತೀರಿ ನೀವು, ಅವನಿಗೆ ನನ್ನ ಎಣಿಕೆ

ಯಾದರೂ ಆಗಿದೆ ಎಂಬುದು ಹೇಗೆ ಗೊತ್ತು. ಅವನಿಗೇನು ನನ್ನದೇ ಸ್ವಪ್ನವೇ ?

ವಸಂತಿ— ನನಗೇನೂ ತಿಳಿಯುವುದಿಲ್ಲ ಮಗು. ನಾನು ಅವರಿಗೆ ಹೇಳಿ ಲಕ್ಷ್ಮಣನಿಗೆ ಕಾಗದ ಹಾಕುವ ಹಾಗೆ ಮಾಡುತ್ತೇನೆ. ಶೇಷಗಿರಿಗೆ ಹೇಳಿ ಅವನಿಂದಲೂ ಬರೆಯಿಸಬಹುದು. ಅವನಿಗೂ ಈ ವಿಷಯ ಕೇಳಿದರೆ ತುಂಬ ಸಂತೋಷವಾದೀತು. ಮಗನನ್ನು ಒಡಂಬಡಿಸಿಯಾನು. ಅತ್ತಲಾಗಿ ಸದಾಶಿವನೂ ಬರೆಯುತ್ತಾನೆ. ನಿನಗೆ ಹೇಳುವಂತೆ ಅವನೇ ಹೇಳಿದ್ದು. ಅವನ ಕಾಗದ ತರುತ್ತೇನೆ. ( ಹೋಗುವಳು. )

ಶ್ರೀಮತಿ— ನನ್ನಲ್ಲಿ ಇಲ್ಲದ ಕಲ್ಪನೆಯನ್ನು ಬಿತ್ತಿ ತಮ್ಮ ತಿರಸ್ಕಾರದಿಂದ ಅದನ್ನು ಬೆಳೆಯಿಸಿ ಈಗ ಪ್ರೀತಿಯಿಂದ ಅದರ ಫಲ ಬೆಳೆಯಿಸುತ್ತಾರೆ. ಈಗ ನಾನು ಕಾಗದ ಬರೆಯಬೇಕೇ? ಈ ಮೂರು ವರ್ಷವೂ ಅವನ ಚಿಂತೆಯಲ್ಲಿ ಇದ್ದೇನೆಂದು ಬರೆಯಬೇಕೇ? ಅಪ್ಪಾ, ಅಮ್ಮ ತೋರಿಸಿದ ಮರ್ಯಾದೆಯಿಂದಾಗಿ ನಾನೇನು ಬರೆದರೂ ಅವನಿಗೆ ಧೈರ್ಯ ಬಂದೀತೇ? ನನ್ನದೆಲ್ಲ ಕನಸೇ. ಅವನನ್ನು ಕಾಣುವಂತೆ ಇದ್ದರಾದರೂ ಮಾತನಾಡಿ ನೋಡಬಹುದಿತ್ತು. ಕಳೆದಾವರ್ತಿ ಬಂದಾಗ ಅವನು ಮಾತನಾಡುವುದಕ್ಕೂ ಅಂಜಿದಂತಿತ್ತು. ಆಗಲೂ ಅಪ್ಪ ಅಮ್ಮ ದೌಲತ್ತಿನಲ್ಲೇ ಇದ್ದರು.

( ಬಂದು ಕಾಗದವನ್ನು ಕೊಡುವಳು. ಅವಳು ನೋಡುವಳು. )

ಶ್ರೀಮತಿ— ಯಾಕೋ ಅಮ್ಮ ನನಗೆ ಯಾವ ಆಸೆಯೂ ಕಾಣುವುದಿಲ್ಲ. ನೀವು ನನ್ನ ಯೋಚನೆಯನ್ನೇ ಮಾಡಬೇಡಿ. ಅಣ್ಣನಿಗೆ ಭ್ರಮೆ. ಎಲ್ಲಿದ್ದರೂ ಅವನ ಒಪ್ಪಿಗೆ ಪಡೆಯುತ್ತೇನೆ ಎಂದು ಬರೆದಿದ್ದಾನೆ. ನನ್ನ ಒಪ್ಪಿಗೆಯನ್ನು ಅಣ್ಣ ಕೇಳುವ ಅವಶ್ಯವೇ ಇರಲಿಲ್ಲ. ಅದು ಅವನಿಗೆ ಗೊತ್ತಿಲ್ಲವೇ? ಮೊದಲು ನೀನೂ ಅಪ್ಪನೂ ಕೂಡಿ ಅಂಥ ಕುಲದ ಅಳಿಯ ನಿಮಗೆ ಆಗಬಹುದೇ ಎಂಬುದನ್ನು ನಿಶ್ಚಯ ಮಾಡಿಕೊಳ್ಳಿ. ಅಲ್ಲದೆ ಅಪ್ಪನೂ ಅವನಿಗೆ ಕಾಗದ ಬರೆಯುವುದು ಬೇಡ. ಕಾಗದ ಬರೆಯುವುದಾದರೂ ಅಣ್ಣನೇ ಬರೆಯಲಿ. ನಿಮ್ಮಿಬ್ಬರ ಒಪ್ಪಿಗೆಯೂ ಅದಕ್ಕಿದೆ

ಎಂಬುದು ಖಂಡಿತವಾದ ಮೇಲೆಯೇ ಬರೆಯಿರಿ. ಯಾಕೆಂದರೆ ನಾಳೆ ನನ್ನಿಂದಾಗಿ ನಿಮ್ಮ ಗೌರವ ಕೆಡುವುದು ಬೇಡ.

ವಸಂತಿ—ತಿರುತಿರುಗಿ ಅದನ್ನೇ ಹೇಳಬೇಡ ಮಗು.

(ಶಂಕರರಾಯರು ಬರುತ್ತಾರೆ.)

ಶಂಕರ—ವಸಂತಿ, ಅಡಿಗೆ ಆಗಿಲ್ಲವೇ ಇನ್ನೂ?

ವಸಂತಿ—ಯಾಕೆ ಇವತ್ತು ತಡವಾದರೇನು? ಆದಿತ್ಯವಾರ ಅಲ್ಲವೇ?

ಶಂಕರ—ಆದಿತ್ಯವಾರ ಹಸಿವೆ ಆಗುವುದಿಲ್ಲವೇ? ನಿತ್ಯದ ಊಟದ ಹೊತ್ತಿಗೆ ಹಸಿವೆ ಆಗಿಯೇ ಆಗುತ್ತದೆ. ಎಲ್ಲಿದ್ದರೂ ಹಸಿವೆ ಆಗುವುದೇ. ಯಾರ ಹತ್ತಿರ ಮಾತನಾಡುತ್ತಿದ್ದಿ ಇಷ್ಟು ಹೊತ್ತು?

ವಸಂತಿ—ಈ ಮನೆಯಲ್ಲಿ ಇನ್ನು ಯಾರ ಹತ್ತಿರ ಮಾತನಾಡಬೇಕು? ಇಲ್ಲಿರುವುದು ನಾನು, ಶ್ರೀಮತಿ.

ಶಂಕರ—ನೀನು ಅವಳಿಗೆ ಸದಾಶಿವನ ಕಾಗದ ತೋರಿಸಿದ್ದೀಯಾ?

ವಸಂತಿ—ಅದನ್ನೇ ತೋರಿಸಿ ಮಾತನಾಡುತ್ತಿದ್ದುದು. ಕಾಗದ ಬಂದು ದಿನವಾಯಿತು. ಆದರೆ ಸಮನಾದ ವೇಳೆ ಸಿಗದೆ ಸುಮ್ಮನಿದ್ದೆ. ಈಗ ಹೇಳಿದ್ದೇನೆ ಅವಳಿಗೆ—ನಿನ್ನ ಮನಸ್ಸಿನಂತಾಗಲೀ ಎಂದು. ನೀವೂ ಒಪ್ಪಿದ್ದೀರಿ ಅಂದೆ.

ಶಂಕರ—ಆಗದೇನು ಮಗು?

ಶ್ರೀಮತಿ—ನನ್ನ ಹತ್ತಿರ ಏನು ಕೇಳುತ್ತೀರಿ? ನಿಮ್ಮ ಭರವಿಗೆ ತಕ್ಕ ಅಳಿಯನಾದರೆ ಆಗಲಿ.

ಶಂಕರ—ನಿನಗೆ ಇನ್ನೂ ಹಳೆಯ ನೆನಪು. ಅದನ್ನೆಷ್ಟು ಮನಸ್ಸಿಗೆ ತಂದುಕೊಳ್ಳುತ್ತೀಯಾ? ಒಂದು ಸಮಯದಲ್ಲಿ ನಾವಿಬ್ಬರೂ ಹಾಗೆ ಎಣಿಸಿದ್ದು ನಿಜ. ಈಗ ದೊಡ್ಡ ಕುಲದ ಸಮ್ಮಂಧ ಬೆಳೆಸಿ ಪಾಠ ಕಲಿತಾಯಿತಲ್ಲಾ. ಅವನಿಗೂ ಬೇಸರ ಬಂದಿರಬೇಕು ನಮ್ಮೆಲ್ಲರ ಮೇಲೆ. ಅದು ಸಹಜವೆ. ಅದಕ್ಕಾಗಿ ನಿನ್ನ ಅಣ್ಣನ ಕಾಗದ ಬಂದ ದಿವಸವೇ—'ನಿನಗೆ ಏನು ಅಸಮಾಧಾನವಿದ್ದರೂ ಎಣಿಸದೆ ಊರಿಗೆ ಒಮ್ಮೆ ಬಂದು ಹೋಗು' ಎಂದು ಬರೆದಿದ್ದೇನೆ. ಏತಕ್ಕೆ ಎಂದು ಆತ ತಿಳಿಸಲಿಲ್ಲ. 'ನಿನ್ನ ತಂದೆ ನನ್ನ ಕಷ್ಟದಲ್ಲಿ ತುಂಬ ಸಹಾಯ ಮಾಡಿದರು. ಹಿಂದೆ ದುಡುಕಿನಿಂದ

ನಾನಾಗಲೀ ವಸಂತಿಯಾಗಲೀ ಏನಾದರೂ ಅಂದಿದ್ದರೆ ಕ್ಷಮಿಸೂ' ಎಂದು ಬರೆದಿದ್ದೇನೆ. ಇದಕ್ಕೂ ಹೆಚ್ಚಿಗೆ ಏನು ಬರೆಯಲಿ? ಆತ ಎಲ್ಲವನ್ನೂ ಮರೆತಾನು, ಬಂದಾನು. ಅಲ್ಲದೆ ನೀನು ಅವನನ್ನು ತುಂಬ ನೆನೆಯುತ್ತೀ ಎಂದೂ ಬರೆದಿದ್ದೇನೆ. ಬಂದಾನು. ಸುಧಾಕರನ ಹಾಗೆ ಎಂದೂ ಮಾಡಲಾರ.

ವಸಂತಿ—ಅವನ ಹಾಗೆ ಯಾರೂ ಮಾಡಲಾರರು.

ಶ್ರೀಮತಿ—ನನ್ನ ಹೆಸರನ್ನು ಯಾಕೆ ಬರೆಯಬೇಕಿತ್ತು? ಆ ಒಂದು ಮಾತಿನಿಂದಲ್ಲವೇ, ಅಣ್ಣ ನನ್ನನ್ನೂ ಅವನನ್ನೂ ಚುಚ್ಚಿದ್ದು. ನೀವೀಗ ಅದೇ ವಿಷಯ ಬರೆದರೆ ಅವನು ಬೇರೆಯೇ ತಿಳಿದಾನು.

ಶಂಕರ—ಯಾಕ ಹಾಗೆ ತಿಳಿಯಬೇಕು? ನಾನು ಹಿಂದಿನ ವಿಷಯವನ್ನೆಲ್ಲ ಮರೆತು ಬಿಡು ಎಂದು ಬರೆದಿಲ್ಲವೇ? ಅಲ್ಲದೆ ಇದು ಒಂದೇ ವಿಷಯ ಬರೆದುದಲ್ಲ. ನಮ್ಮ ಮನೆಯ ವಿಷಯವನ್ನೂ ಬರೆದೆ. ಸುಧಾಕರನ ವಿಷಯವನ್ನೂ ಬರೆದೆ.

ಶ್ರೀಮತಿ—ಅದನ್ನೆಲ್ಲ ಬರೆದು ಏನಾಗಬೇಕು?

ಶಂಕರ—ತುಂಬ ಬೇಸರವಾಯಿತು. ಮನಸ್ಸಿನಲ್ಲಿ ಇದ್ದುದನ್ನೆಲ್ಲ ಬರೆದೆ. ಮದುವೆಯ ಪ್ರಸ್ತಾಪವನ್ನು ಮಾತ್ರ ಬರೆಯಲಿಲ್ಲ. ಅದನ್ನು ಶೇಷಗಿರಿಯಿಂದ ಬರೆಯಿಸುವಾ ಎಂದಿದ್ದೇನೆ.

ಶ್ರೀಮತಿ—ನೀವು ಬರೆದರೂ ಅವನು ನಂಬುವುದು ಕಷ್ಟ.

ಶಂಕರ— ಅದಕ್ಕೇನೆ ಶೇಷಗಿರಿಯಿಂದಲೂ, ಸದಾಶಿವನಿಂದಲೂ ಬರೆಯಿಸುವಾ ಎಂದು ಯೋಜನೆ ಮಾಡಿದ್ದು. ಎಷ್ಟಾದರೂ ಆ ಹುಡುಗ ಆಗಬಹುದು. ಅವನಿಗೆ ಇನ್ನೂ ನಮ್ಮ ಮೇಲೆ ಅಭಿಮಾನವಿದೆ. ಅವನು ಬರೆದುದರಿಂದಲೇ ಶೇಷಗಿರಿ ನನಗೆ ಸಾಲ ಕೊಟ್ಟದ್ದು. ಅವನು ನಮ್ಮ ವಿಷಯದಲ್ಲಿ ತಪ್ಪು ತಿಳಿಯಲಾರ. ಆದರೆ ನಿನ್ನ ಮನಸ್ಸು ಮಾತ್ರ ಗಟ್ಟಿಯಾಗಿರಬೇಕು. ಅವನು ಒಪ್ಪಿದ ಕಾಲಕ್ಕೆ ನೀನು 'ಈಗ ಮದುವೆ ಬೇಡ, ಬಿ.ಎ. ಓದುತ್ತೇನೆ' ಎನ್ನಬಾರದು.

ವಸಂತಿ—ಅವಳು ಯಾಕೆ ಅನ್ನುತ್ತಾಳೆ? ಮದುವೆಯಾಗುವುದಾ

ದರೆ ಅವನನ್ನೇ ಅನ್ನುತ್ತಾಳೆ. ಇಲ್ಲವಾದರೆ ಬೇಡವೇ ಬೇಡ ಎಂದು ಹಟ ಹಿಡಿಯುತ್ತಾಳೆ. ಲಕ್ಷ್ಮಣನನ್ನು ತಂತಿ ಕೊಟ್ಟು ಕರೆಯಿಸಬಾರದೇ?

ಶಂಕರ--ತಂತಿ ಕೊಟ್ಟು ಕರೆಯಿಸುವುದೇ? ಹಾಗೆ ಬೇಕಾದಂತೆ ಬಂದು ಹೋಗುವುದಕ್ಕೆ ಅದು ಮಿಲಿಟ್ರಿ ಸರ್ವಿಸ್ ಅಲ್ಲವೇ?

ವಸಂತಿ—ಈಗ ಅವನು ಮಿಲಿಟ್ರಿಯಲ್ಲಿ ಇರುವುದೇ?

ಶಂಕರ—ಏನಾಯಿತು? ಈಗ ಅವನು ಸೈನ್ಯದಲ್ಲಿ ಕ್ಯಾಪ್ಟನ್ ಆಗಿದ್ದಾನೆ. ಈ ಗಡಿಬಿಡಿಯಲ್ಲಿ ಬರ್ಮಾಕ್ಕೆ ಕಳುಹಿಸಿದರೂ ಕಳುಹಿಸಿದರು.

ವಸಂತಿ—ಹಾಗಾದರೆ ಯಾಕಿಷ್ಟು ಅವಸರ? ಮಿಲಿಟ್ರಿ ಬರ್ಮಾಗಿರ್ಮಾ ಅಂದರೆ, ಕಂಡು ಕಂಡು ಬಾವಿಗೆ ಹಾರಿದ ಹಾಗಾದೀತು. ಲಕ್ಷ್ಮಣನಾಗಬಾರದೆಂದಲ್ಲ. ಆದರೆ ಯುದ್ಧ ಮುಗಿದ ಮೇಲೆ ವಿಚಾರ ಮಾಡುವುದು ಒಳ್ಳೆಯದಲ್ಲವೇ?

ಶ್ರೀಮತಿ—ಹೋ, ನಿನ್ನ ಹತ್ತಿರ ಬೇರೆ ಬೇರೆ ಆಕ್ಷೇಪ ಉಂಟು.

ವಸಂತಿ— ನಿನಗೆ ಗೊತ್ತಾಗುವುದಿಲ್ಲ ಮಗು? ಹೆತ್ತ ತಾಯಿತಂದೆಗಳಿಗೆ ಆ ಎಲ್ಲ ಯೋಚನೆ ಬರುವುದಿಲ್ಲವೇ? ಆದಷ್ಟು ಬೇಗ ನಿಶ್ಚಯ ಮಾಡುವ. ಆದರೆ ಮದುವೆಯನ್ನು ಮಾತ್ರ ಸ್ವಲ್ಪ ಸಮಯ ಮುಂದೆ ಹಾಕುವುದು ಒಳ್ಳೆಯದು. ಮತ್ತೇತಕ್ಕೂ ಅಲ್ಲ ಮಗೂ, ಮಂಗಳೂರು ಭಾಸ್ಕರರಾಯರ ಅಳಿಯನ ಕತೆ ಕೇಳಿದ ಮೇಲೆ ಹೆದರಿಕೆ ಆಗುತ್ತದೆ.

ಶಂಕರ—ಹೌದು ವಸಂತಿ. ಆ ಒಂದು ವಿಷಯ ನಾನು ಯೋಚನೆ ಮಾಡಲಿಲ್ಲ. ಅದು ತುಂಬ ಜವಾಬ್ದಾರಿ ಕೆಲಸ. ಅವರ ಹುಡುಗನಿಗೆ. ಎಯರ್ ಪೈಲೆಟ್ ಕೆಲಸ ಆಗಿತ್ತು. ಒಳ್ಳೆಯ ಸಂಬಳ ಇತ್ತು. ಆಸೆಯಿಂದ ಅವಸರ ಮಾಡಿ ಲಗ್ನ ಮಾಡಿಸಿದರು. ಮದುವೆ ಮುಗಿದ ಆರು ತಿಂಗಳೊಳಗೆ ಹುಡುಗ ಹೋಗುತ್ತಾನೆಂದು ಯಾರು ಎಣಿಸಿದರು? ಈಗ ಹುಡುಗಿಯೂ ಮೂರು ನಾಲ್ಕು ತಿಂಗಳ ಗರ್ಭಿಣಿ ಎಂದು ಕಾಣುತ್ತದೆ. ಅದನ್ನೆಲ್ಲ ಎಣಿಸುವಾಗ ಲಗ್ನದ ಮಟ್ಟಿಗೆ ಸ್ವಲ್ಪ ಮುಂದು ಹೋದರೂ ಅಡ್ಡಿಯಿಲ್ಲವೆಂದು ಕಾಣುತ್ತದೆ.

( ಅಂಚೆಯವನು ಬಂದು ಒಂದು ಕಾಗದವನ್ನು ಕೈಯಲ್ಲಿರಿಸುವನು. ಅದನು ಓದು ಓದುತ್ತ ಮಾತನಾಡುವರು. ) ಸದಾಶಿವನ ಕಾಗದ. ಅವನಿಗೆ ಲಕ್ಷ್ಮಣನ

ಕಾಗದ ಬಂದಿದೆಯಂತೆ. ಸದಾ ಬರೆದು ಉತ್ತರ ತರಿಸಿಕೊಂಡೂ ಆಯಿತು. ಹುಡುಗ ತುಂಬ ಒಳ್ಳೆಯ ಹುಡುಗ.

ವಸಂತಿ—ಮತ್ತೇನೆಂದಿದೆ?

ಶಂಕರ— ಸದಾಶಿವನಿಗೆ ಬರೆದ ಕಾಗದವನ್ನು ಇದರೊಳಗೇನೇ ಇರಿಸಿದ್ದಾನಲ್ಲಾ? (ಅದನ್ನು ಓದುತ್ತ) "ಊರಿಗೆ ಬಂದಾಗ ನೀನು ಒತ್ತಾಯದಿಂದ ಮನೆಗೆ ಕರೆಯಿಸಿಕೊಂಡು ಅಪರೋಕ್ಷವಾಗಿ ಆ ಸೂಚನೆ ಮಾಡಿದ್ದು. ಆದರೆ ನನ್ನಲ್ಲಿ ಆ ವಿಷಯ ಮೊಳೆಯುವ ಮೊದಲೇ ಸುಧಾಕರ ಇಲ್ಲದ ದೂರು ಹೊರಿಸಿ ಉದ್ವಿಗ್ನತೆ ಹುಟ್ಟಿಸಿದ್ದ. ಅವಳಲ್ಲಿ ತುಂಬ ಅಭಿಮಾನವಿದೆಯಾದರೂ ಮದುವೆಯ ಪ್ರಸ್ತಾಪವನ್ನು ಮಾತ್ರ ಎತ್ತಬೇಡ. ಅವಳ ತಲೆಯಲ್ಲಿಯೂ ಈ ವಿಷಯವನ್ನು ಹಾಕ ಬಾರದು. ನಾನಿರುವ ಉದ್ಯೋಗವು ಅಪಾಯಕರದ್ದೇ. ಅಲ್ಲದೆ ಸಂಸಾರಿ ಗಳಿಗೆ ಯೋಗ್ಯವಾದ ವೃತ್ತಿ ಇದು ಎಂದು ನಾನು ತಿಳಿಯುವುದಿಲ್ಲ. ನಮ್ಮ ಜೀವನ ವಿಚಿತ್ರವಾದದ್ದು. ಶ್ರೀಮತಿಯ ವಿಚಾರದಲ್ಲಿ ನಾನು ದುಡುಕಿ ನಾನು ನಾಳೆಗೆ ಅವಳನ್ನು ಇಲ್ಲದ ಸಂಕಟಕ್ಕೆ ಗುರಿಮಾಡಲಾರೆ. ಈ ಯುದ್ಧ ಎಂದು ಮುಗಿಯುತ್ತದೆಯೆಂದು ನಮಗೇ ತಿಳಿಯಲಾರದು. ಅದು ಮುಗಿದರೂ ಆ ದಿನ ಬರುವತನಕ ಅವಳು ಕಾಯಬಾರದು. ನನ್ನ ವಿಷಯವನ್ನೇ ಯೋಚಿಸಬಾರದು. ನನ್ನ ಬುದ್ಧಿ, ಬದುಕು ಎರಡೂ ಸರಿಯೆ, ಅವಳ ಪ್ರತಿ ಅಭಿಮಾನಕ್ಕೆ ತಕ್ಕುದಲ್ಲ.'' ಏನೇನೊ ಬರೆದು ಬಿಟ್ಟಿದ್ದಾನೆ ಹುಡಗ. ಒಂದು ದೃಷ್ಟಿಯಿಂದ ಅವನ ಮಾತೇನೋ ತೀರಾ ಸಹಜವಾದುದು. ಅವನಿಗೆ ತಾನಿರುವ ಸ್ಥಿತಿ ಗೊತ್ತು. ಅದನ್ನು ಚೆನ್ನಾಗಿ ವಿಚಾರ ಮಾಡಿ ಬರೆದ ಹಾಗೆ ಕಾಣುತ್ತದೆ. (ಪತ್ರವನ್ನು ಶ್ರೀಮತಿಗೆ ಕೊಡುವನು.)

ಶ್ರೀಮತಿ—(ಪತ್ರ ನೋಡು ನೋಡುತ್ತ ನಿರಾಶೆಯ ದುಃಖಭಾವವನ್ನು ವ್ಯಕ್ತಪಡಿಸುವಳು.)

ವಸಂತಿ—ಏನು ಬೇಸರವಾಯಿತೇ ಮಗು? ಅವನು ಹೇಳುತ್ತಿರು ವುದಾದರೂ ಸರಿಯಾದ ಮಾತಲ್ಲವೇ? ಬೇರೆ ಯಾರಾಗಿದ್ದರೂ ಆಗಲೀ

ಎಂದು ಬರೆಯುತ್ತಿದ್ದರು. ಈತನಿಗೆ ಹಿಂದುಮುಂದಿನ ಯೋಚನೆ ಇರುವುದರಿಂದ ಮುಂದಿನ ಕ್ಷೇಮವನ್ನು ಎಣಿಸಿ ಹೀಗೆಲ್ಲಾ ಬರೆದಿದ್ದಾನೆ.

ಶ್ರೀಮತಿ—ಅವನೆನ್ನುವ ಮಾತು ಅಲ್ಲವೆಂದು ತೆಗೆದು ಹಾಕಲು ಬರುವುದಿಲ್ಲ. ಆದರೂ ಒಂದು ಸಾರಿ ಮನಸ್ಸಿನಲ್ಲಿ ನೆಟ್ಟ ಆಸೆ ಬೇಕಾದ ಹಾಗೆ ಕೀಳಲು ಬರುತ್ತದೆಯೇ? ನೀವಂತೂ ಅವನನ್ನು ದ್ವೇಷ ಮಾಡಿ ಹಂಗಿಸಿ ಅವನ ಹೆಸರನ್ನು ನನ್ನ ಮನಸ್ಸಿನಲ್ಲಿ ಕೆತ್ತಿ ಬರೆದಿದ್ದೀರಿ. ಹಾಗೆ ಮಾಡದಿದ್ದರೆ ಅವನನ್ನು ಮದುವೆಯಾಗುವ ಯೋಚನೆ ನನ್ನ ಮನಸ್ಸಿನಲ್ಲಿ ಬರುತ್ತಲೇ ಇದ್ದಿಲ್ಲ. ನಿಮಗೆ ನಮ್ಮಿಬ್ಬರ ಸ್ನೇಹ ಪ್ರಣಯವೆಂದು ಕಂಡಿತು. ಆ ನಿಮ್ಮ ಶಾಪವೇ ಸತ್ಯವಾಯಿತು. ಈಗ ನೀವು ಅವನೇ ಆಗಬಹುದೆಂದು ಒಪ್ಪುವಾಗ ವಿಧಿ ಮಾತ್ರ ಬೇರೆ ಬರಹ ಬರೆದಿಟ್ಟಂತೆ ಕಾಣುತ್ತದೆ. ( ಅವಳು ಒಳಕ್ಕೆ ಹೋಗುವಳು. )

ವಸಂತಿ— ಪಾಪ ಅವಳೇನು ಮಾಡಿಯಾಳು? ಅವಳು ಹೇಳುವುದೂ ನಿಜ. ಅವನು ಬರೆಯುವುದೂ ನಿಜ. ಈಗ ಶ್ರೀಮತಿಗೆ ಹತ್ತೊಂಭತ್ತು ಇಪ್ಪತ್ತು ವರ್ಷ ಪ್ರಾಯ ಆಗಲಿಲ್ಲವೇ? ಇಂಥ ಆಸೆ ಅನುರಾಗ ಸ್ವಾಭಾವಿಕವಾದದ್ದು. ಅದನ್ನು ನೋಂದಿಸುವುದು ಕಷ್ಟ ಹಾಗೆಂದು ಅವನೇ ನಿಶ್ಚಯ ಮಾಡಿಲ್ಲದ ವೇಳೆಯಲ್ಲಿ ಇನ್ನು ಯುದ್ಧ ಮುಗಿಯುವ ದಿನದ ತನಕ ಕಾದಿರಲು ಬರುತ್ತದೆಯೇ? ಹಾಗೆ ನಾಲ್ಕೈದು ವರ್ಷಗಳು ಹೋದರೆ ಪ್ರಯೋಜನವಿದೆಯೇ? ಅವನು ಒಲ್ಲೆನೆಂದ ಕಾಲಕ್ಕೆ ನಮಗೆ ಹುಡುಗನನ್ನು ಹುಡುಕುವುದು ಮತ್ತಷ್ಟು ಕಷ್ಟವಾದೀತು.

ಶಂಕರ—ಬೇಡ ನಿಲ್ಲಿಸು ಆ ಮಾತನ್ನು. ನೋಡು ಆ ಶೇಷಗಿರಿಯೇ ಬಂದನಲ್ಲಾ? ಅವನನ್ನು ಮಾತನಾಡಿಸಿ ನೋಡುವ. ಹೇಗಾದರೂ ಮಾಡಿ ಲಕ್ಷ್ಮಣನ ವಾರ್ ಸರ್ವಿಸ್ ಬಿಡುವಂತೆ ಬರುತ್ತಿದ್ದರೆ ಚೆನ್ನಾಗಿರುತ್ತಿತ್ತು.

ವಸಂತಿ–ಹಾಗೆ ಬಿಡಲು ಬರುತ್ತದೆಯೇ ಯುದ್ಧ ನಡೆಯುತ್ತಿರುವಾಗ? ಒಟ್ಟಾರೆ ಇದ್ದ ಸ್ಥಿತಿಯನ್ನು ಮತ್ತಷ್ಟು ಕೆಡಿಸಿದ ಹಾಗಾಯಿತು. ಅವಳು ಒಪ್ಪಲೂ ಇಲ್ಲ. ಒಪ್ಪಿ ಮದುವೆಯಾದರೂ ಜತೆಯಲ್ಲಿರುವ ಹಾಗಿಲ್ಲ

ಅದೆಲ್ಲ ನೋಡಹೋದರೆ ಯುದ್ಧ ಮುಗಿಯುವ ತನಕ ಕಾದು ಕುಳಿತಿರು ವುದೇ ಲೇಸೆಂದು ಕಾಣುತ್ತದೆ. ನಾಳೆ ದೇವರು ಅವಳ ಹಣೆಯಲ್ಲಿ ಬರೆದಿಟ್ಟ ಹಾಗೆಯೇ ಆಗಲಿ.

( ಶೇಷಗಿರಿ ಬರುತ್ತಾನೆ. )

ಶಂಕರ—ಹೇಗಿದ್ದೀ ಶೇಷಗಿರಿ ? ನೀನು ನಮ್ಮ ಮನೆಗೆ ಬರುವುದೇ ಅಪರೂಪ ಆಯಿತಲ್ಲಾ ? ಏನು ಬಂದೆ ? ಏನು ವಿಶೇಷ ? ಆ ಸಾಲದ ಬಡ್ಡಿಗೆ ವಾಯಿದೆಯೂ ಆಯಿತೆಂದು ಕಾಣುತ್ತದೆ.

ಶೇಷಗಿರಿ — ಬಡ್ಡಿ ವಸೂಲಿಗೆ ಬಂದುದೆಂದು ತಿಳಿದಿರಾ ! ಅದು ನಿಮ್ಮಲ್ಲಿದ್ದರೆ ಓಡಿ ಹೋಗುತ್ತದೆಯೇ ? ಏನೋ ಒಂದು ಕಾರಣದಿಂದ ಬಂದೆ. ಒಂದು ವಿಷಯಕ್ಕೆ ನಿಮ್ಮಲ್ಲಿ ಆಲೋಚನೆ ಮಾಡಬೇಕೆಂದು ಕಂಡಿತು, ಅದಕ್ಕಾಗಿ ಬಂದೆ.

ಶಂಕರ—ಅಂಥದೇನು ಮಹತ್ವದ ಸಂಗತಿಯಪ್ಪಾ ?

ಶೇಷಗಿರಿ—ಮತ್ತೇನಿಲ್ಲಾ, ನೀವು ಇಲ್ಲದ್ದನ್ನು ಕೇಳುತ್ತಾನೆಂದು ತಿಳಿಯಬಾರದು. ನಿಮ್ಮ ಬೀಗರ ವಿಷಯದಲ್ಲಿ ಒಂದು ಮಾತನ್ನು ಕೇಳಲು ಬಂದೆ. ನಿಮಗೂ, ರಾಮರಾಯರಿಗೂ ಇಷ್ಟೆಲ್ಲ ಮನಸ್ತಾಪ ಯಾಕೆ ಆಯಿತೆಂದು ತಿಳಿಯಬೇಕಾಯಿತು. ಯಾವಾಗಿನಿಂದ ಕೇಳ ಬೇಕಾಗಿದೆ ಎಂದಿದ್ದೆ. ಆದರೆ ಅವಕಾಶವಾಗಲಿಲ್ಲ.

ಶಂಕರ—ಅದನ್ನೆಲ್ಲ ತಕ್ಕೊಂಡು ಏನು ಮಾಡುತ್ತಿ ಶೇಷಗಿರಿ ! ನಂಟತನ, ಸ್ನೇಹಚಾರ ಎಂಬುದು ಎಲ್ಲಾ ಋಣಾನುಬಂಧ. ಏನೋ ಚನ್ನಾಗಿರುವ ಯೋಗ ಇಲ್ಲಾ ಎಂದು ಕಾಣುತ್ತದೆ. ಆಯಿತು ಹೀಗೆಲ್ಲಾ. ಆ ದಿನ ರಾಮರಾಯರ ಮನೆಯಲ್ಲಿ ನೀನೇ ಇದ್ದಿಯಲ್ಲಾ ? ನನ್ನ ಮಗ ನನ್ನನ್ನು ಕಂಡ ರೀತಿಯನ್ನು ನೋಡಿದಿಯಲ್ಲಾ ? ಅವನೇ ಹಾಗೆ ಮಾಡಿದ ಮೇಲೆ ರಾಮರಾಯರ ಮನೆಯ ವಿಷಯವನ್ನು ನಾನು ಯಾಕೆ ಹೇಳ ಬೇಕು ? ಅವರನ್ನು ದೂರಿ ಫಲವೇನು ?

ಶೇಷಗಿರಿ—ಅದಕ್ಕೆಲ್ಲ ಏನು ಕಾರಣ ಎಂದು ತಿಳಿಯುವ ಮನಸ್ಸು !

ವಸಂತಿ—ಅಷ್ಟಕ್ಕಾಗಿ ಬಂದಿಯಾ ?

ಶೇಷಗಿರಿ—ಹೌದಮ್ಮಾ, ನಿಮ್ಮ ಹತ್ತಿರ ಸುಳ್ಳು ಯಾಕೆ ಹೇಳು

ತ್ತೇನೆ. ಯಾವಾಗಲೇ ತಿಳಿಯಬೇಕೆಂದಿತ್ತು ನನಗೆ. ಈಗ ಸ್ವಲ್ಪ ಅವಶ್ಯವೂ ಇತ್ತು. ಯಾರೋ ಈ ಸಂಗತಿ ತಿಳಿಯಬೇಕೆಂದಿದ್ದಾರೆ.

ವಸಂತಿ—ನಿನಗೂ ಅಲ್ಲ, ಇನ್ನಾರಿಗೋ? ಹಾಗೆ ಯಾಕೆ ನಾವು ಹೇಳಬೇಕು? ನನಗೂ ಅವರಿಗೂ ನಕ್ಷತ್ರ ಕೂಡಲಿಲ್ಲ. ಮುಗಿಯಿತು ಆ ಕತೆ. ಪ್ರಾಯಶಃ ಸೀಮಂತಿನಿ ಜಾತಕವನ್ನು ಯಾರೋ ತೆಗೆದುಕೊಂಡಿರ ಬಹುದು. ನೆಂಟುತನ ಮಾಡುವ ಮೊದಲು ಕುತೂಹಲದಿಂದ ಕೇಳಿರ ಬೇಕು.

ಶೇಷಗಿರಿ—ಹೌದು, ಅದೇ ಸಂಗತಿಗಾಗಿ. ಮೊದಲನೆಯ ಹುಡುಗಿ ಮಾವನ ಮನೆಯಲ್ಲಿ ಜಗಳ ಮಾಡಿ ತನ್ನ ಗಂಡನನ್ನು ತಂದೆಯಿಂದ ಬೇರೆ ಮಾಡಿದಳೂ ಎಂಬ ಸುದ್ದಿ ಇದೆಯಲ್ಲಾ. ನಾಳೆ ಇನ್ನೊಂದು ಲಗ್ನವೂ ಹಾಗಾಗಬಾರದಲ್ಲಾ? ಸೀಮಂತಿನಿಯ ಜಾತಕವೇನೋ ಕೂಡಿ ಬರುತ್ತದೆ. ಆದರೆ ನಾನು ಎರಡೂ ಕಡೆಯವರಿಗೆ ಬೇಕಾದವ. ನಿಜವಾದ ಸಂಗತಿ ಏನೆಂದು ತಿಳಿದು ಹೇಳಲಿಕ್ಕೆ ಹೇಳಿದರು. ನಿಮಗೂ ಅವ ರಿಗೂ, ಸರಿ ಕೂಡಲಿಲ್ಲಾ ಎನ್ನುವುದು ಗೊತ್ತಿದೆ. ಅದು ಊರಿಗೇ ಗೊತ್ತಿದೆ. ಬೇರೆ ಸಮಯವಾಗಿದ್ದರೆ ಇಂಥ ಪ್ರಶ್ನೆಯನ್ನು ನಾನು ಕೇಳು ತ್ತಿರಲಿಲ್ಲ. ಡಾಕ್ಟರರೂ ನನಗೆ ಬೇಕಾದವರು. ಅವರಿಗೂ ನನಗೂ ಹಣದ ಲೇವಾದೇವಿ ತುಂಬಾ ಇದೆ. ಅವರಿಗೆ ಔಷಧ ಮತ್ತೊಂದು ತರಿಸಿ ಕೊಡುತ್ತಾ ಇದ್ದೇನೆ. ಅವರಿಗೆ ಬಿಕ್ಕಿದ್ದನ್ನು ಕೊಂಡು ಮಾರುತ್ತಿದ್ದೇನೆ. ಆದರೂ ನೆಂಟಸ್ತಿಕೆಗೆ ಮೊದಲು ಕೂಲಂಕಷವಾಗಿ ತಿಳಿಯುವುದು ಒಳ್ಳೆಯ ದಲ್ಲವೇ?

ಶಂಕರ—ನಿನಗೆ ರಾಮರಾಯರ ಮನೆಯಲ್ಲಿಯೇ ಆ ಸುದ್ದಿ ಎಲ್ಲ ತಿಳಿಯುವುದಿಲ್ಲವೇ? ರಾಮರಾಯರು, ಸುಲೋಚನಾಬಾಯಿ, ಸುಧಾ ಇವರು ನಿನಗೆ ಏನೂ ಹೇಳದೆ ಇರುತ್ತಾರೆಯೇ?

ಶೇಷಗಿರಿ—ತಂತಮ್ಮ ವಿಷಯಾ ಯಾರೂ ದೂರಿಕೊಳ್ಳುವುದಿಲ್ಲ. ಅವರು ದೂರುವುದು ನಿಮ್ಮನ್ನು. ಆದರೆ ಅದನ್ನು ನಂಬುವ ಮೊದಲು ನಿಮ್ಮ ಮಾತು ಏನೆಂದು ಕೇಳದೆ ಹೋದರೆ....?

ವಸಂತಿ—ಯಾರಪ್ಪಾ ಅದು ಬೇಕಾದದ್ದು? ನಮ್ಮೂರವರಿಗೆ ಅದು ಗೊತ್ತಿದ್ದ ಸಂಗತಿ.

ಶೇಷಗಿರಿ—ಅವರು ಪರವೂರವರೆಂದೇ ತಿಳಿದುಕೊಳ್ಳಿ. ನಂಟಸ್ತಿಕೆ ಮಾಡುವಾಗ ಅಂಥ ಆತುರ ತಾಳುವುದು ಸಹಜ.

ಶಂಕರ—ನಮಗೆ ಯಾರಾದರೆ ಏನು? ಶೇಷಗಿರಿ ನಮ್ಮವ. ನನಗೆ ಬೇಕಾದವ. ಆದ್ದರಿಂದ ಹೇಳುತ್ತೇನೆ ಶೇಷಗಿರಿ. ಇನ್ನೊಬ್ಬರಿಗೆ ಹೇಳುವ ಮನಸ್ಸಿಲ್ಲ ನನಗೆ. ಹೇಳಿ ಹೆಮ್ಮೆ ಪಡುವ ಸಂಗತಿಯಾದರೆ ಸರಿ. ನಮ್ಮ ಸುಧಾ ಪ್ರ್ಯಾಕ್ಟಿಸಿಗೆ ಎಂದು ಮಾವನ ಜತೆಯಲ್ಲೇ ಸೇರಿದನಲ್ಲಾ ಬಂದ ವನೇ? ನಾನೂ ಒಪ್ಪಿದೆ. ಅಲ್ಲಿಂದ ತೊಡಗಿತು ಎಲ್ಲ ಉಪದ್ರ. ಅವನಿಗೆ ದೇವರ ದಯೆಯಿಂದ ಬಹು ಬೇಗ ಸಂಪಾದನೆಗೂ ಆರಂಭ ವಾಯಿತು. ಅಲ್ಲಿಗೆ ಹೋದ ಮಹಾನುಭಾವ ಇಲ್ಲಿಗೆ ಊಟಕ್ಕೆ ಬರುವು ದನ್ನೂ ನಿಲ್ಲಿಸಿದ. ಒಂದೆರಡು ತಿಂಗಳಿನಲ್ಲಿ ಗಂಡ-ಹೆಂಡಿರ ಬಿಡಾರವೇ ಅಲ್ಲಿ ಆಯಿತು. ಅವನು ನಾಲ್ಕು ವರ್ಷ ಮೆಡಿಕಲ್ ಕಲಿಯುವ ತನಕ ದುಡ್ಡು ಸುರಿದವನು ನಾನು. ಕೊನೆಗೆ ಒಂದು ವರ್ಷದ ಮಟ್ಟಿಗೆ ಕೊಟ್ಟದ್ದು ಡಾಕ್ಟರು. ಅವನಿಗೆ ಅವರೇ ಬೇಕಾಯಿತು. ನಾನು ಬೇಡ ವಾಯಿತು. ಇಲ್ಲಿ ನನ್ನ ತಾಪತ್ರಯ ಎಲ್ಲರಿಗೂ ಗೊತ್ತು. ಇನ್ನೂ ಮೂರು ಮಂದಿ ಮಕ್ಕಳು ಇದ್ದಾರಲ್ಲಾ? ಮನೆಯ ಖರ್ಚು ಅವರ ವಿದ್ಯಾಭ್ಯಾಸದ ಖರ್ಚು ನಡೆಯಬೇಕಲ್ಲ? ಈ ಎಲ್ಲ ಹೊರೆ ತಪ್ಪಿಸಿಕೊಳ್ಳು ವುಕ್ಕೆ ಆತ ಮಾಡಿದ ಉಪಾಯ ಇದು. ಅವನದೇ ಯೋಚನೆಯೋ, ಯಾರೋ ಹೇಳಿಕೊಟ್ಟರೋ! ಅಷ್ಟೇ ಆಗಿದ್ದರೆ ಚಿಂತೆ ಇರಲಿಲ್ಲ. ಅವರ ಮಗಳು ಇಲ್ಲಿಗೆ ಬಂದವಳು ನಮ್ಮನ್ನು ಕಸವಾಗಿ ಕಂಡಳು. ಕೆಲಸದಲ್ಲಿ ಸೇರಲೂ ಇಲ್ಲ. ಮೇಲೆ ಮಾತು ಬೇರೆ. ಇಲ್ಲಿನ ಅನ್ನ ಕಾಫಿ ಯಾವುದೂ ಅವಳಿಗೆ ರುಚಿಸಲಿಲ್ಲವಂತೆ. ನಮ್ಮ ಮನೆಯ ಊಟ ಉಂಡರೆ ಮೂರು ದಿವಸದಲ್ಲಿಯೇ ಅವಳಿಗೆ ಕ್ಷಯ ಬಂದೀತು ಎಂಬ ಬಿರುದು ಕೊಟ್ಟು ಹೊರಟು ಹೋದಳು. ಮುಖ್ಯ ದೂರುವುದಕ್ಕೆ ಒಂದು ನೆಪ ಬೇಕಿತ್ತು. ಅದೇ ಸಾಕು. ನನಗೆ ಕಾಣುವ ಹಾಗೆ ಸುಲೋಚನಾಬಾಯಿಗೆ ತಮ್ಮ ಮಕ್ಕಳು ತಮರಿನಲ್ಲಿಯೇ ಇರಬೇಕೆಂಬ ಆಸೆಯಿರಬೇಕು.

ಶೇಷಗಿರಿ — ಹಾಗಿದ್ದರೆ ಏನು ಮಾಡಲು ಬರುತ್ತದೆ? ನಿಮ್ಮ ಮನೆಯ ಊಟವನ್ನೂ ದೂರಬೇಕಾದರೆ? ನಮ್ಮ ಲಕ್ಷ್ಮಣ ನಿಮ್ಮ ಮನೆಯಲ್ಲಿ ವರ್ಷಗಟ್ಟಲೆ ಇದ್ದಿರಲಿಲ್ಲವೇ?

ಶಂಕರ—ನಿಮ್ಮ ಲಕ್ಷ್ಮಣನ ಮಾತು ಬೇರೆ. ಇವರು ಎಷ್ಟೆಂದರೂ ಶ್ರೀಮಂತರಲ್ಲವೇ? ನಮಗೂ ಶೇಷಗಿರಿ, ಮನೆಯಲ್ಲಿ ಕಸಿವಿಸಿ ಮಾಡದೆ ಉಪಾಯವಿಲ್ಲ. ಮೊದಲಿನಂತೆ ಸಂಪಾದನೆ ಎಲ್ಲಿದೆ? ಹಾಗೆ ದರ್ಬಾರು ಮಾಡಲು ಹೋದರೆ ನಾಳಿನ ಗತಿಯೇನು? ಸುಧಾ ಮನೆಯಲ್ಲೇ ಇದ್ದು ತನ್ನ ಸಂಪಾದನೆಯಲ್ಲಿ ಸ್ವಲ್ಪವಾದರೂ ಕೊಡುತ್ತಿದ್ದರೆ ಈ ಕಷ್ಟ ಬರುತ್ತಿರಲಿಲ್ಲ. ಆತ ಇಲ್ಲಿದ್ದ ನಾಲ್ಕು ದಿನಗಳಲ್ಲೂ ಒಂದು ಬಿಡಿಕಾಸಿನ ಸಾಮಾನು ತಂದು ಹಾಕಿದವನಲ್ಲ. ಹಾಗೆ ಅವನು ಹೋದದ್ದು ಒಳ್ಳೆಯದೇ ಆಯಿತು ಅಷ್ಟಾದರೂ ಭಾರ ಕಡಿಮೆ ಆಯಿತೆಂದು ತಿಳಿಯುವುದು.

ವಸಂತಿ— ಅದರಲ್ಲಿಯೂ ಶೇಷಗಿರಿ, ನಾವು ಹಾಲಿಲ್ಲದ ಕಾಫಿ ಕುಡಿದು ಅವಳಿಗೆ ತುಂಬ ಹಾಲು ಹಾಕಿ ಕಾಫಿ ಕೊಟ್ಟೆವು. ಆದರೆ ಅವಳಿಗೆ ನಮ್ಮ ಮನೆಯೇ ಕಣ್ಣಿಗೆ ಕಾಣಿಸಲಿಲ್ಲ. ನಮ್ಮ ಹೊಟ್ಟೆಯಲ್ಲಿ ಹುಟ್ಟಿದವನಿಗೂ ಅದು ಬೇಕಾಗಿರಲಿಲ್ಲ. ಯಾರನ್ನು ದೂರಿ ಫಲವೇನು? ಮದುವೆಯ ನಿಶ್ಚಯಕ್ಕೆ ಬಂದಾಗಲೇ, ಸುಲೋಚನಾಬಾಯಿ ಅಂದ ನೆನಪು ನನಗೆ "ನನ್ನ ಮಕ್ಕಳನ್ನು ವರ್ಷಕ್ಕೆ ಆರು ತಿಂಗಳಾದರೂ ತವರಿಗೆ ಕಳುಹಿಸದವರ ನೆಂಟಸ್ತಿಕೆ ಬೇಡವಪ್ಪಾ. ಇದು ಊರು ಮನೆ, ಬೇಕಷ್ಟು ಸಲ ಬಂದು ಹೋಗಬಹುದು" ಎಂದಿದ್ದಳು. ಈಗೇನು ಅಲ್ಲಿಯೇ ಇದ್ದುಬಿಟ್ಟಿದ್ದಾಳೆ. ಹೋಗುವುದೂ ಬಿಡುವುದೂ ಅವರ ಇಷ್ಟ. ಆದರೆ ಇಷ್ಟೆಲ್ಲ ದೂರಿ ಬೈದು ಹೋಗಬೇಡವಿತ್ತು. ಅವಳಿದ್ದಷ್ಟು ದಿವಸ ನಮ್ಮ ಶ್ರೀಮತಿಯನ್ನು ಹಂಗಿಸಿದ್ದಕ್ಕೆ ಲೆಕ್ಕವೇ ಇಲ್ಲ.

ಶಂಕರ—ಇದ್ದ ಸಂಗತಿ ಇಷ್ಟು. ಉಪ್ಪು, ಖಾರ ಹಚ್ಚದೇ ಹೇಳಿದ್ದೇವೆ.

ವಸಂತಿ— ಅವರ ಮನೆಯ ಹೆಣ್ಣನ್ನು ಕೊಂಡು ಹೋಗಿ ನಾಳೆ ಹುಡುಗನನ್ನೇ ಅಲ್ಲಿಗೆ ಕಳುಹಿಸುವರೋ ಇಲ್ಲವೇ ಹುಗಿಯನ್ನು ಆರು ತಿಂಗಳು ತವರುಮನೆಯಲ್ಲಿ ಬಿಡುವವರೋ, ನೆಂಟಸ್ತಿಕೆ ಮಾಡಲಿ.

ನಮಗೂ ಸಂತೋಷವೇ. ನಾವೇನಾದರೂ ಅವರ ಹತ್ತಿರ ಇನ್ನು ಜಗಳ ಮಾಡಲಿಕ್ಕಿದೆಯೇ?

ಶೇಷಗಿರಿ— ಹಾಗೆ ವರ್ಷಕ್ಕೆ ಆರು ತಿಂಗಳ ಕಾಲ, ಹೆಣ್ಣು ಮಕ್ಕಳನ್ನು ತವರುಮನೆಗೆ ಕಳುಹಿಸುತ್ತಾರೆಯೇ ?

ವಸಂತಿ— ಅವರು ಆ ರೀತಿ ತಮ್ಮ ಮಕ್ಕಳನ್ನು ಬೆಳೆಯಿಸಿಕೊಂಡು ಬಂದಿದ್ದಾರೆ. ಅವರ ಮಕ್ಕಳಿಗೆ ಗಂಡನ ಮನೆಗಿಂತ, ತವರುಮನೆಯೇ ಮುಖ್ಯ ಅನಿಸೀತು. ನಾನು ಶೇಷಗಿರಿ ಮದುವೆಯಾದ ತಿಂಗಳಲ್ಲೇ ಇವರ ಜತೆಯಲ್ಲಿ ಬರತೊಡಗಿದೆ. ನಾವಿಬ್ಬರೂ ಲಗ್ನವಾಗಿ ಇಪ್ಪತ್ತೈದು ಮೂವತ್ತು ವರ್ಷ ಆಗಿರಬಹುದು. ಒಟ್ಟಾರೆ ಹತ್ತು ಸಾರಿ ತವರಿಗೆ ಹೋಗಲಿಲ್ಲ. ಹತ್ತು ದಿನಕ್ಕಿಂತ ಹೆಚ್ಚಿಗೆ ಅಲ್ಲಿದ್ದ ನೆನಪೂ ನನಗಿಲ್ಲ. ಮೊದಲಿನ ಬಾಣಂತಿತನಕ್ಕೇನೋ ನಾಲ್ಕು ತಿಂಗಳ ಕಾಲ ಅಲ್ಲಿದ್ದೆ. ತವರುಮನೆ ಯಾರಿಗೆ ಬೇಡ ? ಆದರೆ ಗಂಡನ ಮನೆಯದೂ ಸಂಸಾರ ಅಲ್ಲವೇ ? ಅದನ್ನು ಯಾರು ನೋಡಬೇಕು ? ಹೆಂಡತಿ ಗಂಡನನ್ನು ಆರು ತಿಂಗಳ ಕಾಲ ಬಿಟ್ಟಿರುವುದಾದರೆ ಆ ಗಂಡ ನಾಳೆ ಬೇರೆ ಹೆಂಡತಿಯನ್ನು ನೋಡದೆ ಇರುತ್ತಾನೆಯೇ? ಅದೆಲ್ಲಾ ಅನುಭವಿಸಿದ ಮೇಲೆಯೇ ಗೊತ್ತಾಗಬೇಕು.

ಮುಖ್ಯ ದೊಡ್ಡಸ್ತಿಕೆಯ ಜಂಭ ಶೇಷಗಿರಿ. ಸ್ವಲ್ಪ ಬಡತನ, ಕಷ್ಟ, ಸುಖ, ದುಃಖ ಗೊತ್ತಿದ್ದರೆ ಹೀಗಾಗುತ್ತಿರಲಿಲ್ಲ. ಇನ್ನು ಹೇಳಲಿಲ್ಲಾ ಅಂಥ ನೆಂಟಸ್ತಿಕೆಯ ಉಮೇದುವಾರರು ಯಾರೆಂದು ? ಇನ್ನು ಅವರ ಡ್ರೆಸ್ಸು, ಫೇಶನ್, ಆಭರಣ ಇದು ಸಾಮಾನ್ಯರಿಗೆ ಪೂರೈಸುವ ಸಂಗತಿಯೂ ಅಲ್ಲ. ನಮಗೆ ಮನೆಗೆ ಬಂದ ತಿಂಗಳೊಳಗೇನೇ ಅದರ ಅನುಭವವಾಯಿತು. ಅವರ ಹುಡುಗಿಯರನ್ನು ಕಂಡವರಿಗೆ ಅದು ತಿಳಿಯದೇ ಹೋದರೆ ಯಾರೇನು ಮಾಡುವ ಹಾಗೆಯೂ ಇಲ್ಲ.

ಶೇಷಗಿರಿ— ಶಂಕರರಾಯರೇ, ನಾನು ನಿಮ್ಮ ಹತ್ತಿರ ಸುಳ್ಳು ಹೇಳಲಾರೆ. ಬೇರೆಯವರ ವಿಷಯಕ್ಕಲ್ಲ ನಾನು ಇದನ್ನು ಕೇಳಿದ್ದು. ಈಗ ಆರೇಳು ತಿಂಗಳಿನಿಂದ ಡಾಕ್ಟರರು ನನ್ನನ್ನು ತುಂಬ ಬಲವಂತ ಮಾಡುತ್ತಿದ್ದಾರೆ.

ಶಂಕರ—ಯಾಕೆ ಲಕ್ಷ್ಮಣನ ವಿಚಾರದಲ್ಲಿಯೇ ?

ಶೇಷಗಿರಿ — ಹೂಂ. ಒಂದು ಸಾರಿಗೆ ನಿಮಗೆ ನಾನು ಸಾಲ ಕೊಟ್ಟದ್ದು ಗೊತ್ತಾಗಿ ಅವರಿಗೆ ಸಿಟ್ಟು ಬಂದಿತ್ತು. ಆದರೆ ನನಗೂ, ಅವರಿಗೂ ತುಂಬ ವ್ಯವಹಾರವಿರುವುದರಿಂದ ಹೆಚ್ಚಿಗೆ ಅದನ್ನು ತೋರಿಸಿ ಕೊಳ್ಳಲಿಲ್ಲ. ಮೊದಲಿನ ದಿನಗಳಾಗಿದ್ದರೆ ಅವರ ಮನೆಯ ಕಸಬರಿಗೆಯು ಮೇಲಿರುವಷ್ಟು ಗೌರವ ನನ್ನಲ್ಲಿರುತ್ತಿತ್ತು. ಆದರೆ ನೋಡಿ ದೇವರು ನನ್ನ ಅಧೃಷ್ಟವನ್ನೂ ಬದಲಿಸಿದ್ದಾನೆ. ನನ್ನ ಮಗನ ಅದೃಷ್ಟವನ್ನೂ ಬದಲಿಸಿದ್ದಾನೆ. ಮಗ ಕ್ಯಾಪ್ಟನ್ ಆಗಿದ್ದಾನಲ್ಲಾ ? ನನ್ನ ಕೈಯಲ್ಲಿಯೂ ನಾ ಾಸಿದೆ ಎಂಬುದು ಗೊತ್ತು.

ವಸಂತಿ—ಎಷ್ಟು ಸಂಪಾದನೆ ಮಾಡಿದ್ದೀಯಾ ಶೇಷಗಿರಿ? ವ್ಯಾಪಾರ ಚೆನ್ನಾಗಿದೆ ಎಂದು ಕೇಳಿದೆ.

ಶಂಕರ— ಅದನ್ನೆಲ್ಲ ಏನು ಕೇಳುವುದು ವಸಂತಿ? ನನ್ನ ಹತ್ತಿರ ಅವನು ನಿಮ್ಮ ಸಂಪಾದನೆ ಎಷ್ಟೆಂದು ಕೇಳುತ್ತಾನೆಯೇ? ಏನೋ ಯುದ್ಧ ಕಾಲ ವ್ಯಾಪಾರಕ್ಕೆ ತೊಡಗಿದ, ಯಾರೋ ಸಹಾಯ ಮಾಡಿದರು ಎಷ್ಟು ಬೆಲೆ ಹೇಳಿದರೂ ಬರುವ ಸಮಯ, ಅದೃಷ್ಟ ಒಳ್ಳೆಯದು ಇದ್ದುದರಿಂದ ವ್ಯಾಪಾರ ಚೆನ್ನಾಗಿ ಆಗಿ ಒಂದು ಇಪ್ಪತ್ತು ಇಪ್ಪತ್ತೈದು ಸಾವಿರ ಸಂಪಾದನೆ ಮಾಡಿರಬಹುದು.

ವಸಂತಿ—ಆಗಲಪ್ಪಾ, ದೇವರು ಅವನಿಗೆ ಒಳ್ಳೆಯದು ಮಾಡಿದ್ದರೆ ನಮಗೆ ಒಳ್ಳೆಯದು ಮಾಡಿದ ಹಾಗೆ. ಇಷ್ಟೆಲ್ಲ ಕಾಲ ಬೇಡಿ, ಕಾಡಿ ಅವನು ಪಟ್ಟ ಕಷ್ಟ ಸಾಲದೆ? ಈ ವಯಸ್ಸಿನಲ್ಲಾದರೂ ಅವನಿಗೆ ಸಂತೋಷ ಸಿಗುವುದು ನ್ಯಾಯ.

ಶೇಷಗಿರಿ—ಏನೋ ಅಮ್ಮ, ದೇವರು ಏನೋ ಒಳ್ಳೆಯದು ಮಾಡಿದ್ದಾನೆ. ದುಡ್ಡು ಬಂದಿದೆಯೆಂದು ನಾನು ಐದಕ್ಕೆ ಹತ್ತಾಗಲೂ ಇಲ್ಲ. ದುಡ್ಡಿಲ್ಲದಾಗ ಹತ್ತಕ್ಕೆ ಐದು ಆಗಲೂ ಇಲ್ಲ. ಒಂದಿಷ್ಟು ಹಣ ಇದೆ. ಸ್ವಂತಕ್ಕೆ ಒಂದು ಮನೆಯನ್ನು ಕೊಂಡಿದ್ದೇನೆ ಎಂಬುದರಿಂದ, ನೀನೂ ತಾನೂ ಎನ್ನುತ್ತಿದ್ದ ಜಾತಿಯವರೆಲ್ಲ ಬನ್ನಿ ಶೇಷಗಿರಿರಾವ್ ಎಂದು ಮಾತನಾಡಿಸತೊಡಗಿದ್ದಾರೆ. ಈಗ ನಾನು ಡಾಕ್ಟರನ ಎದುರಿಗೂ ಬಂದಿ

ದ್ದೇನೆ. ಅವರಿಗಿಂತ ಹೆಚ್ಚಾಗಿ ಸುಲೋಚನಾಬಾಯಿಗೆ ನಮ್ಮ ಲಕ್ಷ್ಮಣ ನಿಗೆ ಮಗಳನ್ನು ಕೊಡುವ ಆಶೆ ಮಗಳ ಫೋಟೋವನ್ನು ಅವನಿಗೆ ಕಳುಹಿಸಿದ್ದಾರೆ. ನಾಲ್ಕೈದು ಸಾವಿರ ವರದಕ್ಷಿಣೆಯನ್ನು ಕೊಡು ತ್ತೇನೆಂದೂ ಹೇಳಿದ್ದಾರೆ. ಲಕ್ಷ್ಮಣ ಒಪ್ಪುವ ಹಾಗೆ ನಾನು ಮಾಡ ಬೇಕಂತೆ. ಈ ವರ್ಷ ಬೇಸಿಗೆಯಲ್ಲೇ ಲಗ್ನ ಮಾಡಬೇಕೆಂದು ಅವರ ಹಟ.

ಶಂಕರ— ಯಾಕೆ ಆಗಬಾರದು? ನಮ್ಮ ಅದೃಷ್ಟದಲ್ಲಿ ಕೂಡಿ ಬರಲಿಲ್ಲಾ ಎಂದರೆ ನೀವೂ, ಅವರೂ ಯಾಕೆ ಕೂಡಬಾರದು? ಆದರೆ ಈ ಸಂಗತಿ ನಮ್ಮ ಸುಧಾಕರನಿಗೆ ಗೊತ್ತಿಲ್ಲವೇ ?

ಶೇಷಗಿರಿ—ಯಾಕೆ ಎನ್ನುತ್ತೀರಿ ?

ಶಂಕರ— ಅವನಿಗೆ ಗೊತ್ತಾದರೆ ಎಂದೂ ಬಿಡಲಿಕ್ಕಿಲ್ಲ.

ಶೇಷಗಿರಿ—ಯಾರು ನಿಮ್ಮ ಮಗನೇ? ಮನಿಯಲ್ಲಿದ್ದ ಮೇಲೆ ತಿಳಿ ಯದೇ ಇರುತ್ತದೆಯೇ? ಅವರೇನು ಈ ವಿಷಯ ನನ್ನ ಹತ್ತಿರವೇ ಮಾತ ನಾಡಲಿಲ್ಲ.

ವಸಂತಿ—ಅವನಿಗೆ ತಿಳಿದಿರಲಿಕ್ಕಿಲ್ಲ. ತಿಳಿದಿದ್ದರೆ ಇಷ್ಟೆಲ್ಲ ಮುಂದು ವರಿಸುವುದಕ್ಕೆ ಬಿಡುತ್ತಲೇ ಇದ್ದಿಲ್ಲ. ಲಕ್ಷ್ಮಣನನ್ನು ಕಂಡರೆ ಅವನಿಗೆ ಆಗದು.

ಶೇಷಗಿರಿ—ಏನೊ ಆ ಸಂಗತಿ ನನಗೆ ಗೊತ್ತಿಲ್ಲ. ಡಾಕ್ಟರು ರಜೆಯ ಮೇಲೆ ಬಾ ಎಂದು ಎರಡೆರಡು ತಂತಿ ಬಿಟ್ಟಿದ್ದಾರೆ. ನಾನೀಗ ಉಭಯ ಸಂಕಟದಲ್ಲಿ ಇದ್ದೇನೆ. ನಾನು ತಂತಿ ಕೊಟ್ಟು ಅವನನ್ನು ಕರೆಯಿಸಬೇಕಂತೆ. ಲಕ್ಷ್ಮಣನಿಗೆ ಅದನ್ನೆಲ್ಲ ಹೇಳಿ ಒತ್ತಾಯ ಮಾಡುವ ಧೈರ್ಯ ನನಗಿಲ್ಲ. ಆ ರೀತಿ ಅವನನ್ನು ನಾನು ಬೆಳೆಯಿಸಿ ಬಂದಿಲ್ಲ.

ಶಂಕರ—ಶೇಷಗಿರಿ, ನಾನು ಒಂದು ಮಾತು ಹೇಳಿದರೆ ನಿನಗೆ ಬೇಸರವಾಗಲಿಕ್ಕಿಲ್ಲವೇ ?

ಶೇಷಗಿರಿ—ನೀವು ಆಡಿದರೆ ಬೇಸರವೇ? ನನ್ನ ಹಿತಕ್ಕಲ್ಲದ ಯಾವು ದನ್ನೂ ನೀವು ಹೇಳಲಾರಿರಿ ಎಂಬುದು ನನಗೆ ಗೊತ್ತು.

ಶಂಕರ—ಹಾಗೇನಿಲ್ಲ. ಮನುಷ್ಯರೆಲ್ಲರೂ ಸ್ವಾರ್ಥಿಗಳೇ. ನಾನು ನನ್ನ ಸ್ವಾರ್ಥದ ದೃಷ್ಟಿಯಿಂದ ಮಾತನಾಡುತ್ತಿದ್ದೇನೆ. ಅದರಲ್ಲಿ ನಿನಗೆ ಲಾಭವಿದೆಯೋ, ಇಲ್ಲವೋ ಎಂಬುದನ್ನು ನೀನು ನೋಡಬೇಕು.

ಶೇಷಗಿರಿ—ಅದು ಸಮನೇ. ಏನು ಸಂಗತಿ ಹೇಳಿ?

ವಸಂತಿ — ನಾನೂ ಅವರಿಗೆ ನಿನ್ನನ್ನು ಮಾತನಾಡಿಸಬೇಕೆಂದು ಹೇಳಿದ್ದೆ. ನಮ್ಮ ಸದಾಶಿವನಿಂದ ಲಕ್ಷ್ಮಣನಿಗೆ ಕಾಗದವನ್ನೂ ಬರೆಯಿಸಿದೆ.

ಶೇಷಗಿರಿ—ಯಾವ ವಿಷಯದಲ್ಲಿ?

ಶಂಕರ—ಮತ್ತೆ ಯಾವ ವಿಷಯ ಶೇಷಗಿರಿ! ಮನೆಯಲ್ಲಿ ಹಡೆದ ಹೆಣ್ಣು ಪ್ರಾಯಕ್ಕೆ ಬಂದಿರುವಾಗ ಬೇರೆಯ ವಿಷಯವೇನು? ಶ್ರೀಮತಿಯನ್ನು ಅವನಿಗೆ ಕೊಡುವ ಇಷ್ಟ ನಮ್ಮೆಲ್ಲರದು. ಮೇಲೆ ನೀನೂ ಒಪ್ಪಬೇಕು, ಅವನೂ ಒಪ್ಪಬೇಕು.

ಶೇಷಗಿರಿ—ರಾಯರೇ, ನಾನು ಒಪ್ಪುವ ಬಿಡುವ ವಿಷಯ ಅದರಲ್ಲಿ ಇಲ್ಲವೇ ಇಲ್ಲ. ಅದೇ ಮಾತನ್ನೂ ನಾನು ಡಾಕ್ಟರರಿಗೆ ಹೇಳಿದ್ದೇನೆ. ಅಲ್ಲದೆ ನನ್ನ ಸ್ವಂತ ಅಭಿಪ್ರಾಯ ಹೇಳುವುದಕ್ಕೂ ಯೋಚನೆ ಮಾಡಬೇಕು. ಡಾಕ್ಟರು ಬಹಳ ದಿನಗಳಿಂದ ಹೇಳುತ್ತಿದ್ದಾರೆ. ಆದರೆ ಅವರ ನೆಂಟುತನ ನನ್ನ ಯೋಗ್ಯತೆಗೆ ಹೆಚ್ಚಿನದೆಂದು ಕಾಣುತ್ತದೆ. ನಿಮ್ಮನ್ನೇ ಆ ರೀತಿಯಲ್ಲಿ ಕಂಡವರು ನನ್ನನ್ನು ಹೇಗೆ ಕಂಡಾರು? ಅಳಿಯನನ್ನು ಒಪ್ಪಿಯಾರು. ದೊಡ್ಡ ಚಾಕರಿ ಇದೆ, ಸಂಬಳವಿದೆ. ಆದರೆ ಅಲ್ಲಿ ಅಳಿಯನ ತಂದೆಗೆ ಮರ್ಯಾದೆ ಸಿಗುತ್ತದೇ ಎಂದು ನಾನು ಹೇಳಲಾರೆ. ಈಗೇನು ಮರ್ಯಾದೆ ನನಗೆ ಇದ್ದರೂ, ಅದು ಶೇಷಗಿರಿಗೆ ಸಿಗುವ ಮರ್ಯಾದೆ ಅಲ್ಲ. ಅವನ ಪೆಟ್ಟಿಗೆಯಲ್ಲಿರುವ ಕಾಸಿಗೆ ಬರುವ ಮರ್ಯಾದೆ. ಆ ವಿಷಯದಲ್ಲಿ ನೀವಾದರೂ ಸರಿಯೇ. ಅವರಾದರೂ ಸರಿಯೇ. ನಮ್ಮ ಜಾತಿಯ ಇನ್ನಾರಾದರೂ ಸರಿಯೆ.

ಆದಕ್ಕೆ ನನ್ನ ಯೋಚನೆ ಹೀಗಿದೆ: ಅವನೇ ಬರಲಿ, ಅವನೇ ನಿಶ್ಚಯ ಮಾಡಲಿ. ಈ ಎರಡು ಸಂಗತಿಯನ್ನೂ ಅವನ ಮುಂದೆ ಇಡುತ್ತೇನೆ. ಅವನಿಗೆ ಬಿಟ್ಟ ಸಂಗತಿ ಅದು. ನಾನು ಕೈ ಹಾಕುವುದಿಲ್ಲ. ಒಳ್ಳೆಯದು, ಕೆಟ್ಟದು ಎರಡೂ ನನಗೆ ಬೇಡ. ಶ್ರೀಮಂತರ ನೆಂಟಸ್ತಿಕೆ

ಬೇಕೆಂದೂ ನನಗೆ ಅಪೇಕ್ಷೆ ಇಲ್ಲ. ಆದರೆ ಅವನ ಇಚ್ಛೆ ಹೇಗಿರುತ್ತದೋ ಯಾರು ಬಲ್ಲರು? ನಾಲ್ಕು ಮಂದಿಯೊಡನೆ ತಿರುಗಾಡಿದವನು, ಫೇಶನ್ನಿನ ಹುಡುಗಿ ಬೇಕೆಂದು ತೋರಬಹುದು. ಈಗಿನ ಕಾಲದ ಮಕ್ಕಳಿಗೆ ಹಾಗೆಲ್ಲ ತೋರುವುದು ಸಹಜವೇ.

ಶಂಕರ — ನಿನಗೆ ನಮ್ಮ ನೆಂಟಸ್ತಿಕೆ ಬೆಳೆಸುವ ವಿಚಾರದಲ್ಲಿ ಅಸಂತೋಷವಿಲ್ಲವಷ್ಟೆ? ಜಾತಕದ ನಕಲೊಂದನ್ನು ನನಗೆ ಕೊಡು. ಅದು ಬರಿಯ ಶಾಸ್ತ್ರಕ್ಕೆ. ಅವರಿಬ್ಬರೂ ಒಪ್ಪಿದರೆ ಜಾತಕವನ್ನು ನೋಡ ಬೇಕೆಂದೂ ಇಲ್ಲ.

ಶೇಷಗಿರಿ— ನನಗೆ ಅಸಂತೋಷವಾಗಿರುವ ಮನೆಯಾದರೆ ನಾನು ಬಂದು ಹೋಗುತ್ತೇನೆಯೇ? ನಿಮ್ಮ ಮೇಲೆ ವಿಶ್ವಾಸ ಇಲ್ಲದೇ ಹೋಗಿದ್ದರೆ ಆ ದಿವಸ ನಾನಾಗಿ ಎರಡು ಸಾವಿರ ಆಮೇಲೆ ಇನ್ನೊಂದು ಸಾವಿರ ತಂದು ಕೊಡುತ್ತಿದ್ದೆನೇ? ನಂಬಿಕೆ ಇದೆ. ವಿಶ್ವಾಸ ಇದೆ. ಅಲ್ಲದೆ ನನ ಯೋಗ್ಯತೆ ಎಷ್ಟು ಕಡಮೆಯದೂ ಎಂದು ನನಗೆ ಗೊತ್ತೂ ಇದೆ; ಇದು ಏನು ಲಗ್ನ ಆಗುವುದಿದ್ದರೂ ನಮ್ಮ ಹುಡುಗನ ಯೋಗ್ಯತೆಯಿಂದಾಗ ಬೇಕು. ನನಗೆ ನೋಡಿ, ಅವನು ಮಿಲಿಟ್ರಿಗೆ ಸೇರುವುದು ಎಷ್ಟೇನೂ ಸಂತೋಷವಿದ್ದಿಲ್ಲ. ಯಾರು ಪುಸಲಾಯಿಸಿದರೋ, ಏನು ಮಾಡಿದರೋ ಹೇಗೆ ಗೊತ್ತು? ಈಗೇನೋ ದೊಡ್ಡ ಕೆಲಸ, ದೊಡ್ಡ ಸಂಬಳವಿದೆ. ನಾಳೆ ಯುದ್ಧ ಮುಗಿದ ಮೇಲೆ ಅವನನ್ನು ಮನೆಗೆ ಕಳುಹಿಸಿದರೂ ಆಯಿತು. ಸಂಬಳ ಇಳಿಸಿದರೂ ಆಯಿತು. ಜೀವನ ಮಾರಾಟ ಮಾಡಿ ಜೀವನ ಗಳಿಸುವ ಉದ್ಯೋಗ ಅದು. ಆ ದುಡ್ಡು ಇಲ್ಲದಿದ್ದರೂ ಚಿಂತೆ ಇಲ್ಲ ಎಂದು ಕಾಣುತ್ತದೆ. ಅದೃಷ್ಟ ಚೆನ್ನಾಗಿದ್ದರೆ ಊರಲ್ಲಿಯೇ ಗಳಿಸಬಹುದಲ್ಲಾ? ದೇವರು ಕೊಡುವಾಗ ಎಲ್ಲಿಯೂ ಕೊಡುತ್ತಾನೆ. ಅಲ್ಲಿ ಇಲ್ಲಿ ಎಂದಿದೆಯೇ? ಕೊನೆಗೆ ಬೊಂಬಾಯಿಯಲ್ಲಿಯಾದರೂ ಇರಬಹುದಿತ್ತು. ಸಂಬಳ ಐನೂರು ಇದ್ದರೂ, ಹೆಚ್ಚಿಗೆ ಇದ್ದರೂ ನನಗೆ ಕಳುಹಿಸುತ್ತಿರುವ ಸ್ವಲ್ಪ ಹಣ ಅಲ್ಲದೆ ಇನ್ನೇನೂ ಉಳಿಸುತ್ತಿರಲಾರ.

ಅವನ ತಾಯಿ ಬದುಕಿರುತ್ತಿದ್ದರೆ ಎಂದಿಗೂ ಅವನನ್ನು ಹೋಗಲು ಬಿಡುತ್ತಿರಲಿಲ್ಲ. ನನಗೆ ಗೊತ್ತಿದ್ದರೂ ತಡೆಯುತ್ತಿದ್ದೆ. ಅವನು ಮಿಲಿಟ್ರಿ

ಸೇರಿದ ಲಾಗಾಯ್ತು ನನ್ನ ಚಿಂತೆ ಹೇಳತೀರದು. ದಾರಿಯಲ್ಲಿ ಟೆಲಿಗ್ರಾಫ್ ಪೇದೆ ಹೋಗುತ್ತಿದ್ದರೂ ನನ್ನ ಹೊಟ್ಟೆಯಲ್ಲಿ ಚುರಿಚುರಿ ಆಗುತ್ತದೆ. ಇನ್ನೇನು ಯೋಚನೆ ಮಾಡಿ ಫಲ ಹೇಳಿ ?

ಹೋಗುತ್ತೇನಮ್ಮಾ. ನಿಮಗೆ ವಿಳಾಸ ಗೊತ್ತಿದೆಯಲ್ಲಾ ? ನೀವೇ ತಂತಿ ಕೊಡಿ, ಕಾಗದ ಬರೆಯಿರಿ. ಅವರಿಗೂ ಹಾಗೆಯೇ ಅಂದಿದ್ದೇನೆ. ಈಗಂತೂ ನೀವಿಬ್ಬರೂ ಅಪೇಕ್ಷೆ ಮಾಡುವಾಗ ನಾವು ಸುಮ್ಮನಿರುವುದೇ ಲೇಸು

ವಸಂತಿ—ನಾವು ಅಂದದ್ದು ಅವರ ಕಿವಿಗೆ ಬೇಡ.

ಶೇಷಗಿರಿ—ನನಗೆ ಅಂಥ ಕೆಲಸ ಮಾಡಿಯೇ ಗೊತ್ತಿಲ್ಲ.

ಶಂಕರ— ಹಾಗಲ್ಲ ಶೇಷಗಿರಿ; ಎಲ್ಲಿಯಾದರೂ ಮಾತನಾಡುವಾಗ ಬಾಯಿ ತಪ್ಪಿ ಬಾರದಿರಲೀ ಎಂದು ಎಚ್ಚರ ಹೇಳಿದ್ದು. ನಮ್ಮ ಅವರ ಸಮ್ಬಂಧ ಕಳೆಯಿತು. ಇನ್ನು ಯಾಕೆ ಅದನ್ನು ಕೆರಳಿಸಬೇಕು? ಈ ವಿಷಯದಲ್ಲಿ ನಿನ್ನ ಮಗನಿಗೆ ಒಳ್ಳೆಯದಾದರೆ ನಮಗೆ ಒಳ್ಳೆಯದಾದ ಹಾಗೆ. ಈಗಿನ ಕಾಲದಲ್ಲಿ ಹೆಣ್ಣುಮಕ್ಕಳೇ ಆಗಲಿ, ಗಂಡುಮಕ್ಕಳೇ ಆಗಲಿ ಅವರವರಿಗೆ ಬೇಕಾದ ನಂಟುತನ ಅವರವರೇ ನೋಡಿದರೆ ಒಳ್ಳೇದು. ನಮ್ಮ ಜವಾಬ್ದಾರಿ ಸುಲಭವಾಗಿ ತಪ್ಪಿತಲ್ಲ.

ಶೇಷಗಿರಿ—ಹೋಗುತ್ತೇನೆ.

ಶಂಕರ—ಹೂಂ ಆಗಲಿ. ಒಂದು ಲೋಟ ಕಾಫಿ ಕುಡಿದು ಹೋಗು.

ಶೇಷಗಿರಿ—ಈ ಹೊತ್ತಿಗೆ ಏನು ಕಾಫಿ? ಬೇಡ ಇನ್ನೊಮ್ಮೆ ಬಂದಾಗ.

ವಸಂತಿ—ಬಾಯಲ್ಲಿ ಅನ್ನುತ್ತೀಯಾ ಹಾಗೆ. ನೀನು ಬರುವುದು ಮಾತ್ರ ಅಪರೂಪ.

ಶೇಷಗಿರಿ—ಅಂದರೆ ಅಮ್ಮಾ ಮೊದಲು ಉದ್ಯೋಗವಿಲ್ಲದೆ ಮನೆ ಮನೆ ಸುತ್ತಾಡುವುದೇ ಕೆಲಸ. ಈಗ ಒಂದು ಅಂಗಡಿಯನ್ನು ಮಾಡಿ ಕೊಂಡಿದ್ದೇನಲ್ಲಾ? ನನ್ನ ಸಣ್ಣ ಹುಡುಗನಿಗೆ ಏನೂ ಅನುಭವ ಸಾಲದು ಹಾಗಾಗಿ ವ್ಯಾಪಾರಕ್ಕೂ ನಾನೇ ಓಡಾಟಕ್ಕೂ ನಾನಾಗಿದ್ದೇನೆ. (ತೆರಳುವನು.)

ಶಂಕರ— ಅನೇನು ವಸಂತಿ, ನಮ್ಮ ಆಸೆಗೆ ಕಲ್ಲು ಹಾಕಲಿಕ್ಕೇನೇ

ಅವರು ಈ ಉಪಾಯ ಹೂಡಿದ ಹಾಗೆ ಕಾಣುತ್ತದೆಯಲ್ಲಾ ? ನಾವೇನೇ ಇಷ್ಟು ದಿನ ಯೋಚಿಸಿ ಯೋಚಿಸಿ ಕೊನೆಗೆ ಸದಾಶಿವನ ಮಾತಿಗೆ ಒಪ್ಪಿದ್ದು. ಇವರು ಯಾವುದೂ ಇಲ್ಲದೆ ನೆಟ್ಟಗೆ ಹುಡುಗನಿಗೆ ಬರೆದಿದ್ದಾರೆ, ತಂತಿ ಕೊಟ್ಟಿದ್ದಾರೆ ಎಂದರೆ ಏನು ಆಶ್ಚರ್ಯ ?

ವಸಂತಿ— ಅದೆಲ್ಲ ಸೀಮಂತಿನಿಯ ಹಟದಿಂದ ನಡೆದಿರಬೇಕು. ಅವಳಿಗೆ ವಾರ್ ಸರ್ವಿಸಿನವರ ಉಡುಗೆ ನೋಡಿ ಮೋಹ ಬಂದ ಹಾಗೆ ಕಾಣುತ್ತದೆ. ಗಂಡ ಏಯರ್ ಪೈಲಟ್‌ನಾಗಬೇಕು. ಇಲ್ಲವಾದರೆ ಭಾರಿ ನೌಕರನಾಗಬೇಕು. ತಾನು ಅವನೊಂದಿಗೆ ಮೆರದಾಡಬೇಕು ಎಂದೆಲ್ಲಾ ಆಸೆ. ಅದಕ್ಕೇನೆ ಅವರು ಈ ಗಾಳ ಹಾಕಿದ್ದು.

ಶಂಕರ— ಅದೊಂದು ಆಶ್ಚರ್ಯವಲ್ಲ. ಲಕ್ಷ್ಮಣನ ವಿಷಯದಲ್ಲಿ ನಮಗೆ ಇಷ್ಟೆಲ್ಲ ಉಪದೇಶ ಮಾಡಿ ನಮ್ಮ ತಲೆ ಕೆಡಿಸಿ ಗೊಂದಲವೆಬ್ಬಿಸಿದ ಇವನೇ ನಾಳೆ ಲಕ್ಷ್ಮಣನನ್ನು ತನ್ನ ಷಡ್ಡುಕನನ್ನಾಗಿ ಮಾಡಿಕೊಳ್ಳುವ ದೆಂದರೆ ಆಶ್ಚರ್ಯವಲ್ಲವೇ? ನಿಜಕ್ಕೂ ಡಾಕ್ಟರು ಅವನನ್ನು ಅಳಿಯನನ್ನಾಗಿ ಮಾಡಿಕೊಂಡರೆ ಮರ್ಯಾದೆ ಇದ್ದವನಾದರೆ ಇವನು ಅವರ ಮನೆಯನ್ನು ಬಿಡಬೇಕಾದೀತು.

ವಸಂತಿ— ನನಗೂ ಅದೇನೆ ಕಾಣುತ್ತದೆ. ನಮ್ಮ ಶ್ರೀಮತಿ ಮತ್ತು ಲಕ್ಷ್ಮಣನ ಮೇಲೆ ದೂರು ಕೊಟ್ಟು ನಿಷ್ಕರ ಮಾಡಿಸಿದವನು ಅವನು. ಈಗ ತನ್ನ ಮಾವ ಮಾಡುವ ಕೆಲಸಕ್ಕೆ ಅವನ ಆಕ್ಷೇಪವಿಲ್ಲ. ಇದನ್ನೆಲ್ಲ ನೋಡಿದರೆ ಎರಡು ವರ್ಷದ ಹಿಂದೆಯೇ ಸದಾಶಿವನ ಮಾತು ಕೇಳಿ ನೆಂಟಸ್ತಿಕೆ ಮಾಡಬಹುದಿತ್ತು. ಇನ್ನೇನು ಆಗುತ್ತದೆಯೋ ಆಗಲಿ. ಸುಧಾಕರನಿಗಾದರೂ ಸಂತೋಷವಾಯಿತಲ್ಲ. ಅದೇ ಲಕ್ಷ್ಮಣ ಅವನ ಷಡ್ಡುಕನಾಗುವ ಯೋಚನೆ ಬಂದರೆ?

ಶಂಕರ— ಲೋಕ ಇರುವುದೇ ಹಾಗೆ. ಜನಕ್ಕೆ ತಾವು ಮಾಡಿದ ತಪ್ಪು ಕಾಣುವುದಿಲ್ಲ. ಬೇರೆಯವರ ಹುಳುಕು ಕಾಣುವುದು ಮಾತ್ರ ಬಹು ಬೇಗ. ಆಗಲಿ, ನಮಗೂ ಅನ್ನುವ ಕಾಲ ಬಂದೀತಲ್ಲಾ !

ವಸಂತಿ— ಅನ್ನುವುದು ಬಿಡುವುದು ಬೇರೆ ವಿಚಾರ. ನಮ್ಮ ಪಾಲಿಗೆ ತೊಂದರೆ ಬಂತಲ್ಲಾ ? ಸೀಮಂತಿನಿಯ ಮುಂದೆ ನಮ್ಮ ಹುಡುಗಿಯೇ ?

ಅವಳು ತುಂಬ ಶೋಕಿ! ಶ್ರೀಮತಿಗೆ ಏನು ಫೇಶನ್ನು ಬರುತ್ತೆ ಹೇಳಿ?

ಶಂಕರ—ಫೇಶನ್ನಲ್ಲ ಮಣ್ಣು! ದುಡ್ಡು ಕೊಟ್ಟು ಒಂದು ಗೇಣು ಉದ್ದದ ಲೋಲಕ್ಕು ತರಿಸಿ, ಕಿವಿಗೆ ತೂಗಿಸಿ ಮುಖಕ್ಕೆ ಇಷ್ಟು ಪೌಡರ್ ಬಡಿದು, ತುಟಿಗೆ ಇಷ್ಟು ಕೆಂಪು ಬಣ್ಣ ಸವರಿಬಿಟ್ಟರೆ ಆಗುತ್ತೆ ಫೇಶನ್. ಆಮೇಲೆ ಒಂದು ಸೊಳ್ಳೆ ಪರದೆಯನ್ನೋ, ಜೇಡರ ಬಲೆಯನ್ನೋ, ಸೀರೆ ಒಂದು ಸುತ್ತಿಸಿದರೆ ಫೇಶನ್ ಆಯಿತು. ಎಳೆಯ ಪ್ರಾಯ. ವಿಚಿತ್ರವಾಗಿ ಏನು ಕುಣಿದರೂ ಫೇಶನ್ ಆಗುತ್ತೆ. ಮುಂಬಯಿಗೆ ಹೋಗಿ ಮೂರು ತಿಂಗಳಿದ್ದ ಮುಸುರೆ ತಿಕ್ಕುವ ಹುಡುಗಿಯರೆಲ್ಲ ಸಿನೇಮಾ ಸ್ಟಾರೆಂದು ತಿಳಿದು ಊರಿಗೆ ಬರುತ್ತಾರೆ. ಇವರ ಫೇಶನ್ ಏನೂ ತಿಳಿಯದ ನಮ್ಮ ಊರವರ ಮುಂದೆ ಮುಂಬಯಿಯಲ್ಲಿ ಇವರನ್ನು ನುಂಗುವಂತಹ ಫೇಶನ್ ಮಾಡುವ ಜನರಿದ್ದಾರೆ. ದುಡ್ಡು ಮರ್ಯಾದೆ ಎರಡೂ ಚೆಲ್ಲಿ ಬಿಟ್ಟರೆ ಫೇಶನ್ನಿಗೆ ಬರಗಾಲವೇ ?

ವಸಂತಿ— ಆದರೇನು? ಜನ ಗಂಟುಬೀಳುವುದು ಅಂಥ ಥಳಕಿಗೆ! ಅವರ ಹುಡುಗಿಯೂ ಥಳಕಿನವಳು, ಮೇಲೆ ನಾಲ್ಕೈದು ಸಾವಿರ ವರ ದಕ್ಷಿಣೆ ಕೊಡುತ್ತಾರೆ. ಅದರ ಮುಂದೆ ನಾವೇನು ಕೊಟ್ಟೇವು? ಕೊಡ ಲಿಕ್ಕೆ ನಮ್ಮಲ್ಲೇನು ಉಂಟು?

ಶಂಕರ—ಲಕ್ಷ್ಮಣ ನಮ್ಮ ವಿಷಯದಲ್ಲಿ ಆ ಮಾತನ್ನು ಆಡಲಾರ. ಶೇಷಗಿರಿಯೂ ಅದನ್ನು ಬೇಡಲಾರ. ಅವರಿಬ್ಬರಿಗೂ ನಮ್ಮ ಸ್ಥಿತಿ ಗೊತ್ತಿದೆ. ಅಲ್ಲದೆ ಲಕ್ಷ್ಮಣನಿಗೆ ಶ್ರೀಮತಿ ಎಂದರೆ ಜೀವ. ಎಳೆತನದ ಸ್ನೇಹವನ್ನೆಲ್ಲಾ ಮರೆತಾನೆಯೇ? ಅವನು ಊರಿಗೆ ಬಂದರೆ, ನಾವು ಮಾತನಾಡಿಸಿದರೆ ಒಪ್ಪಿಯಾನು. ಇನ್ನು ಇವರಿಗೆ ಅನುಮಾನವಾಗಿ ಅಡ್ಡಕಾಲು ಹಾಕಿದರೆ ಏನಾಗುತ್ತದೆಯೋ? ಅಂತೂ ಒಳ್ಳೇ ಸ್ಪರ್ಧೆ ಗಂಟು ಬಿತ್ತು.

ವಸಂತಿ—ಬೇರೆಯವರ ವಿಷಯ ತಪ್ಪಿದರೂ ನನಗೆ ಬೇಸರವಿರಲಿಲ್ಲ. ಆದರೆ ಶ್ರೀಮತಿ ಹಟ ಹಿಡಿದಿದ್ದಾಳಲ್ಲಾ—ಲಗ್ನವಾದರೆ ಅವನನ್ನು, ಇಲ್ಲ ವಾದರೆ ಬೇಡವೇ ಬೇಡವೆಂದು.

ಶಂಕರ—ಅವನೇ ಬೇಡ ಎನ್ನುವ ಕಾಲ ಬಂದರೆ ಯಾರೇನು ಮಾಡಲಿಕ್ಕಾಗುತ್ತದೆ ?

ವಸಂತಿ—ನೀವೂ ಅವನಿಗೊಂದು ತಂತಿ ಕೊಡಿ. ಅವನು ಬರುವ್ದಾದರೆ ಸದಾಶಿವನನ್ನು ತಂತಿ ಕೊಟ್ಟು ಕರೆಯಿಸಬೇಕು. ಅವನೂ ಶ್ರೀಮತಿಗೂ ಹೇಳಿದರೆ ಅವರ ಮಾತು ತೆಗೆದು ಹಾಕಲಾರ.

ಶಂಕರ—ನನಗೂ ಹಾಗೆ ಕಾಣಿಸುತ್ತದೆ. ಆದರೂ ನೋಡು ಲಗ್ನವೆಂಬುದು ನಮ್ಮ ಕೈಯೊಳಗಿನ ಬದುಕೇ ? ಇಂಗ್ಲಿಷಿನಲ್ಲೊಂದು ಗಾದೆ ಇದೆ. Marriages are made in heaven. ಮುಂದೆ ಗಂಡ ಹೆಂಡಿರ ಸಂಸಾರ ನರಕವೇ ಆಗಲಿ. ಆದರೂ ಮದುವೆ ಬ್ರಹ್ಮ ಹಾಕಿದ ಗಂಟು. ಪ್ರಯತ್ನ ಮಾಡುವ. ಶ್ರೀಮತಿಯ ಅದೃಷ್ಟದಲ್ಲಿ ಅವನು ಬರೆದದ್ದಾದರೆ ಆಗುತ್ತದೆ ಇಲ್ಲವಾದರೆ ಇಲ್ಲ. ಸುಧಾಕರನಂಥವರು ಹೀಗೆ ತಿರುಗಿ ಬೀಳುವುದು ಸಾಧ್ಯವಿದ್ದರೆ, ಮನುಷ್ಯನನ್ನು ನಂಬಿ ಏನು ಮಾಡಬಂದೀತು ? ಎಲ್ಲಾ ದೈವಯತ್ನ.

ವಸಂತಿ—ಶ್ರೀಮತಿಗೆ ಈ ಸಂಗತಿ ಹೇಳಲೇ ?

ಶಂಕರ—ಯಾವುದು ? ಸೀಮಂತಿನಿಯನ್ನು ಅವನಿಗೆ ಕೊಡಲು ಮಾಡಿದ್ದಾರೆಂದೇ ? ಬೇಡ ಬೇಡ. ಅವಳು ಕೇಳಿ ಇನ್ನಿಷ್ಟು ಕಣ್ಣೀರು ಬಿಟ್ಟಾಳು. ಮೂರು ವರ್ಷ ಕಾಲ ಅವನದ್ದೇ ತಪಸ್ಸು ಮಾಡಿದ್ದಕ್ಕೆ ಈಗಲೇ ನಿರಾಶೆ ಹುಟ್ಟಿಸುವುದು ಬೇಡ. ಅದೃಷ್ಟವಿದ್ದರೆ ಆಗುತ್ತದೆ. ಇಲ್ಲವಾದರೆ ಇಲ್ಲ.

ಆದರೂ ಸುಧಾ ಇದನ್ನು ಒಪ್ಪಿದ-ಎಂಬುದು ನಂಬಲು ಅಸಾಧ್ಯದ ಸಂಗತಿಯಾಗಿದೆ.

ವಸಂತಿ—ಅವನ ಮಾವನ ಮನೆಯವರು ಮಾಡುವ ಕೆಲಸವೇ? ಅವರೆಲ್ಲ ದೇವತೆಗಳು ! ಅವರಂಥವರು ತಪ್ಪು ಮಾಡುತ್ತಾರೆಯೇ ? ತಪ್ಪುಗಿಪ್ಪು ನಮ್ಮಂಥವರು ಮಾಡುವ ಕೆಲಸ.

---

# ಐದನೆಯ ಅಂಕ

ಕಳೆದ ಘಟನೆಯ ಹದಿನೈದು ದಿನಗಳ ನಂತರ.
ಸ್ಥಳ : ಶಂಕರರಾಯರ ಮನೆಯ ಬೈಠಕಖಾನೆ.
ಸದಾಶಿವ ಲಕ್ಷ್ಮಣ ಊರಿಗೆ ಬಂದಿರುತ್ತಾರೆ.

ಶಂಕರ—ಏನು, ಲಕ್ಷ್ಮಣನ ಮನೆಗೆ ಹೋದ ಸದಾಶಿವ ಇನ್ನೂ ಬಂದಿಲ್ಲವೇ? ಶೇಷಗಿರಿಗೂ ಜನ ಕಳುಹಿಸಿದ್ದೆ, ಅವನೂ ಬರಲಿಲ್ಲ. ಶೇಷಗಿರಿ ಡಾಕ್ಟರರ ದಾಕ್ಷಿಣ್ಯಕ್ಕೆ ಬಿದ್ದು ಅಂಜಿ ಬಾರದೆ ಇರಬಹುದು. ಲಕ್ಷ್ಮಣನನ್ನು ಕರೆಯುತ್ತೇನೆ ಎಂದು ಹೋದ ಸದಾಶಿವನು ಬರಲಿಲ್ಲವೇಕೆ?

ವಸಂತಿ—ನಮ್ಮ ತಂತಿಯು ಹೋದ ದಿವಸವೇ ಸದಾಶಿವ ಹೊರಟಿದ್ದರೆ ಎಲ್ಲ ಸಮನಾಗುತ್ತಿತ್ತು. ಲಕ್ಷ್ಮಣ ಬಂದು ಎರಡು ದಿವಸದ ಮೇಲೆ ಬಂದಿದ್ದಾನೆ. ಲಕ್ಷ್ಮಣನನ್ನು ರಾಮರಾಯರು ಮನೆಯಲ್ಲಿ ಕಟ್ಟಿಹಾಕಿದ ಹಾಗೆ ಇರಿಸಿಕೊಂಡಿದ್ದಾರಂತೆ. ಅಲ್ಲಿಂದ ಹೊರಗೇನೇ ಬಂದಿಲ್ಲವೆಂದು ಅವರ ಮನೆಯ ಕೆಲಸದ ಸುಬ್ಬಿ ಹೇಳಿದಳು.

ಶಂಕರ—ಅವರು ಬುದ್ಧಿವಂತರು. ತಮ್ಮ ಕೆಲಸವಾಗುವ ತನಕ ಅವನನ್ನು ಏಕೆ ಬಿಟ್ಟಾರು? ಬಾಯಿ ಬನ್ನಣೆಯಿಂದ ಅವನನ್ನು ಮರುಳು ಮಾಡಿ ಕುಳ್ಳಿರಿಸಿಕೊಂಡಿರಬೇಕು. ನನಗೆ ಈ ವಿಷಯವಾದ ಆಸೆಯೆಲ್ಲ ಹೋಗಿದೆ. ನಾವು ತಂತಿ ಕೊಟ್ಟಿಲ್ಲವೇ ಅವನಿಗೆ? ಅವನ ಮೇಲೆ ಎಲ್ಲಾ ನಿರ್ಧಾರ ಹೊಂದಿದೆ. ಅವನಿಗೆ ಆ ಹುಡುಗಿಯ ಥಳಕೇ ಮೆಚ್ಚುಗೆಯಾಗಿ ಅಲ್ಲಿ ಕೂತಿದ್ದರೂ ಕೂತಿದ್ದಾನು. ಹಾಗಿರುವಾಗ ನಮ್ಮ ನೆನಪು ಯಾಕೆ ಬಂದೀತು?

ವಸಂತಿ—ನಮ್ಮ ಮನೆಯಲ್ಲಿ ನಾಲ್ಕಾರು ವರ್ಷ ಕಾಲ ಉಂಡು ತಿಂದ ನೆನಪಿಗಾದರೂ ಬರಬಹುದಿತ್ತು. ಲಗ್ನವಾಗದಿದ್ದರೆ ಹೋಗಲಿ, ಬಂದು ಮಾತನಾಡಿ ಹೋಗಬಹುದಿತ್ತು. ಅವರಂತೆ ಒತ್ತಾಯ ಮಾಡಿ ಅವನ ಕೊರಳಿಗೆ ಶ್ರೀಮತಿಯನ್ನು ಕಟ್ಟುತ್ತಿದ್ದೆವೇ? ಆ ತ್ರಾಣ ನಮಗಿದೆಯೇ?

ಶಂಕರ—ಇಲ್ಲ, ಅವರಿಗೆ ಮಾತು ಕೊಟ್ಟು ಲಗ್ನ ನಿಶ್ಚಯವಾದ ಮೇಲೆ ಬಂದಾನು. ಬರಿದೆ ದಾಕ್ಷಿಣ್ಯಕ್ಕೆ ಕಟ್ಟು ಬೀಳುವುದಕ್ಕೆ ನಮ್ಮಲ್ಲಿಗೆ ಬರುತ್ತಾನೆಯೇ ? ನಿನ್ನೆಯೂ ಅವನು ಸದಾಶಿವನಿಗೆ ಕಾಣಿಸಲಿಲ್ಲ. ಮೋಟರಿನಿಂದ ಇಳಿದು ಬಂದವನೇ ಅವನನ್ನು ಹುಡುಕಿ ಹೋದನಂತೆ. 'ಲಕ್ಷ್ಮಣ ಎಲ್ಲಿ ಹೋಗಿದ್ದಾನೋ!' ಎಂದು ಗೊತ್ತಿಲ್ಲದವರಂತೆ ಶೇಷಗಿರಿ ಹೇಳಿದನಂತೆ. ಈಗ ನೋಡುವಾಗ ಅವರಿಬ್ಬರೂ ಒಂದೇ.

ನನ್ನನ್ನು ಕೇಳಿದರೆ ಲಕ್ಷ್ಮಣನ ವಿಷಯದಲ್ಲಿ ನಾವು ಪ್ರಯತ್ನ ಮಾಡುತ್ತಿದ್ದೇವೆ ಎಂಬ ಸುದ್ದಿಯನ್ನು ಶೇಷಗಿರಿ ಡಾಕ್ಟರಿಗೆ ಹೇಳಿರಬೇಕು. ಅದಕ್ಕಾಗಿ ಇಷ್ಟೆಲ್ಲ ಗುಟ್ಟು, ಗುಪ್ತ.

ವಸಂತಿ—ಇರಲೂ ಸಾಕು. ಎಷ್ಟೆಂದರೂ ಅವನು ದಿನಕ್ಕೆ ಹತ್ತು ಸಾರಿ ಡಾಕ್ಟರಲ್ಲಿಗೆ ಹೋಗಿ ಬರುವವ. ನಮ್ಮ ಹಂಗು ಅವನಿಗೇನಿದೆ ? ಬದಲು ಅವನ ಹಂಗಿನಲ್ಲಿ ನಾವಿದ್ದೇವೆ ಸಾಲ ಮಾಡಿ.

ಶಂಕರ—ಅವರು ಬೀಸಿದ ಬಲೆಯೇ ಗಟ್ಟಿಯಾದರೆ ಇನ್ನು ಎಂಟು ದಿನಕ್ಕೆ ಶೇಷಗಿರಿ ತನ್ನ ನೋಟಿನ ಸಾಲಕ್ಕೆ ನೋಟೀಸು ಕೊಡುತ್ತಾನೆ. ಆಗ ಆಪತ್ತಿನ ಕಾಲಕ್ಕೆ ನಮಗೆ ಉಪಕಾರ ಮಾಡಿದ್ದೇನೋ ನಿಜ. ಆದರೆ ಇನ್ನು ಮುಂದೆ ಆ ರಿಯಾಯತಿ ಉಳಿಯಲಿಕ್ಕಿಲ್ಲ. ಹೊಸ ನೆಂಟರು ಹೇಳಿದ ಹಾಗೆ ಕುಣಿದಾನು.

ವಸಂತಿ—ನೆಂಟಸ್ತಿಕೆ ಆದರೆ! ಆದರೆ ನನಗೆ ಯಾಕೋ ಅನಿಸುತ್ತಿದೆ— ನಮ್ಮ ಮಾತಿಗೆ ಬೆಲೆ ಇಲ್ಲದೇ ಹೋದರೂ ಹುಡುಗನಿಗೆ ಶ್ರೀಮತಿ ಎರಡು ಮಾತು ಹೇಳಿದರೆ ಖಂಡಿತ ತೆಗೆದು ಹಾಕಲಾರನೆಂದು. ಎಂಥ ಸ್ಥಿತಿಯಲ್ಲಿಯೂ ಅವಳ ಮಾತನ್ನು ಮುರಿಯಲಾರನು. ಶ್ರೀಮತಿ ಎಂದರೆ ಪೂಜಿಸುತ್ತಿದ್ದವನು ಅವನು. ಅವಳಾದರೂ ಸರಿಯೆ. ನಾನು ಲಕ್ಷ್ಮಣನಿಗೆ ಸಣ್ಣದೊಂದು ಕೆಲಸ ಹೇಳಿದರೂ, ಯಾಕೆ ಅವನನ್ನು ದಣಿಸುತ್ತೀರಿ ಎಂದು ಹೇಳುತ್ತಿದ್ದಳು. ಅಷ್ಟಿದ್ದ ಅವಳ ಪ್ರೀತಿಯನ್ನು ಮರೆತಾನೆಯೇ ? ಏನೆಂದರೂ ಲಕ್ಷ್ಮಣನ ಗುಣ ಒಳ್ಳೇಯದು.

ಶಂಕರ—ಲಕ್ಷ್ಮಣ ಚಿನ್ನದಂಥವನೇ ಇರಲಿ. ಇವರ ಕೈಯಲ್ಲಿ ಸಿಕ್ಕಿದರೆ ಕಿತ್ತಾಳಿಯಾಗುತ್ತಾನೆ. ಮೊದಲು ನಮ್ಮ ಸುಧಾಕರ ಹೇಗಿದ್ದ ?

ಇವರ ಕೈಗೆ ಸಿಕ್ಕಿದ ಮೇಲೆ ಮುಂದೆ ಹೇಗಾದ? ಚಾಡಿ ಬೆಸೆಯುವುದ ರಲ್ಲಿ, ಒಂದಕ್ಕೆ ನೂರು ಮಾಡಿ ಹೇಳುವುದರಲ್ಲಿ, ಒಬ್ಬರಿಗಿಂತ ಒಬ್ಬರು ಮೇಲೇ. ಅಲ್ಲದೆ ಪ್ರತಿಯೊಬ್ಬರೂ ತಂತಮ್ಮ ಲಾಭ ನೋಡುತ್ತಾರೆಯೇ ಹೊರತು, ನಮ್ಮ ಅವಸ್ಥೆ ನೋಡುತ್ತಾರೆಯೇ ?

ವಸಂತಿ—ಅವನೀಗ ಬಂದರೆ ಏನೂ ಮಾಡಬೇಡವೇ ?

ಶಂಕರ—ಕಾಫಿ ತಿಂಡಿ ಮಾಡು. ಮನೆಗೆ ಬಂದವರಿಗೆ ಮರ್ಯಾದೆ ಕಡಿಮೆ ಮಾಡಬಾರದಲ್ಲಾ? ಅವನು ಆಯಿತೂ ಅನ್ನಲೀ, ಬೇಡಾ ಅನ್ನಲೀ, ನಮ್ಮ ಪ್ರಯತ್ನ ನಾವು ಮಾಡಬೇಕು....ಆದರೆ ನಮ್ಮ ಶೇಷಗಿರಿ ಇಷ್ಟು ಕದಿಮಾ ಎಂದು ನಾನು ತಿಳಿದಿರಲಿಲ್ಲ.

ವಸಂತಿ—ನಾನು ತಿಂಡಿ ತೀರ್ಥದ ವಿಷಯ ಮಾತನಾಡಿದ್ದಿಲ್ಲ. ಅದಕ್ಕೊಂದು ಹೇಳಬೇಕೇ? ಆ ಉಪಚಾರ ಅಳಿಯನಾಗುವವನಿಗೆ ಮಾತ್ರ. ಉಳಿದವನಿಗೆ ಇಲ್ಲಾ ಎಂದಿದೆಯೇ? ಲಕ್ಷ್ಮಣ ಬಂದರೆ ಅವ ನನ್ನು ಮಾತನಾಡಿಸುವುದು ಯಾರೂ ಎಂದು ಕೇಳಿದ್ದು. ಶ್ರೀಮತಿಯೇ ಅವನನ್ನು ಮೊದಲು ಮಾತನಾಡಿಸುವುದು ಒಳ್ಳೇಯದಲ್ಲವೇ ?

ಶಂಕರ—ಪಾಪ! ಅವಳೇನು ಮಾಡಿಯಾಳು? ಭಿನ್ನಾಣದ ಮಾತು ಗಳನ್ನಾಡಿ ಅವನನ್ನು ಒಲಿಸುವುದಕ್ಕೆ ಬಂದೀತೆ? ಅಥವಾ ನೀನು ನನ್ನ ಗಂಡನಾಗು ಎಂದು ಕೇಳುವುದು ಸಾಧ್ಯವೇ? ಆ ಕೆಲಸ ಅವಳೂ ಮಾಡ ಬೇಕಿಲ್ಲ, ನಾವೂ ಮಾಡಬೇಕಿಲ್ಲ. ಯಾಕೆ ನಿನಗೆ ಯೋಚನೆ? ಬಂದಿದ್ದಾ ನಲ್ಲ ಸದಾಶಿವ. ಅವನು ಮಾಡುತ್ತಾನೆ. ಆದರೆ ಮೊದಲು ಸದಾಶಿವ ನಿಗೇನೇ ಅವನು ಸಿಕ್ಕಬೇಕಲ್ಲ? ಆಮೇಲೆ ಅಲ್ಲವೇ ಮುಂದಿನ ವಿಚಾರ.

ವಸಂತಿ—ಹೌದು. ಅವನು ಬೇಡವೆಂದರೆ ನಮ್ಮ ಗತಿ ಏನು?

ಶಂಕರ—ಲಕ್ಷ್ಮಣನನ್ನು ನಂಬಿಯೇ ನೀನು ಮಗಳನ್ನ ಹಡೆದವಳ ಹಾಗೆ ಮಾತನಾಡುತ್ತೀಯಲ್ಲಾ? ಅವನಿಗೆ ದಯೆ, ದಾಕ್ಷಿಣ್ಯ, ಋಣ, ಉಪಕಾರ ಇವೆಲ್ಲಾ ಇದ್ದರೆ ಆಯಿತೆಂದಾನು. ಎಲ್ಲರ ಹಾಗೆ ಅದನ್ನೆಲ್ಲ ಮರೆಯುವವನಾದರೆ ಇಲ್ಲ ಎಂದಾನು. ಅಷ್ಟೇ ಅಲ್ಲವೆ? ಶ್ರೀಮತಿಯ ಹಣೆಯಲ್ಲಿ ಬ್ರಹ್ಮ ಬರೆದ ಗೆರೆಯನ್ನು ಯಾರು ತಪ್ಪಿಸುತ್ತಾರಂತೆ?

ವಸಂತಿ—ನೀವು ಇಷ್ಟು ದಿನ ಮನೆಯಲ್ಲಿ ಇದ್ದೀರೇ ಹೊರತು

ಶ್ರೀಮತಿಯ ಮನಸ್ಸೇ ನಿಮಗೆ ಗೊತ್ತಿಲ್ಲ. ಅವನಲ್ಲವಾದರೆ ಲಗ್ನವೇ ಬೇಡ ಎನ್ನುತ್ತಾಳೆ ಅಲ್ಲವೇ ಅವಳು?

ಶಂಕರ—ಅಷ್ಟಿದ್ದರೆ ಅವಳೇ ಅವನನ್ನು ಒಲಿಸಲಿ. ಪೂಜೆ ಸತ್ಕಾರ ಮಾಡಿ ಬೇಡಲಿ.... ಅಯ್ಯೋ ನೀನೊಬ್ಬಳು! ಯಾರೂ ಒಬ್ಬರನ್ನೇ ನಂಬಿ ಹುಟ್ಟಲಿಲ್ಲ. ಲಕ್ಷ್ಮಣ ಬೇಡವೆಂದರೆ ಒಂದು ನಾಲ್ಕು ದಿನ ಬೇಸರವಾದೀತು. ಮುಂದೆ ಎಲ್ಲವನ್ನೂ ಮರೆತಾಳು.

ವಸಂತಿ—ಮರೆಯುವ ಜಾತಿ ಅಲ್ಲ ಅವಳು. ಆದರೆ ಈತ ನಿಮಗೆಲ್ಲ ಸದಾಶಿವನಿಗೆ ಅಷ್ಟೆಲ್ಲ ಯಾಕೆ ಬರೆಯಬೇಕಿತ್ತು? ಯುದ್ಧ ಮುಗಿದ ಮೇಲಾದರೆ ಒಂದು ಲೆಕ್ಕ; ಅದರ ಮೊದಲು ಯಾವ ಸಂಗತಿಯೂ ಬೇಡ ಎಂದು ಬರೆದ. ನನಗೂ ಅದು ಸರಿಯಾದ ಮಾತೂ ಎಂದು ಕಂಡಿತು. ಆದರೆ ಸೀಮಂತಿನಿಯ ನಂಟುತನಕ್ಕೆ ಬಂದಿದ್ದಾನಲ್ಲಾ! ಯುದ್ಧ ನಿಲ್ಲುತ್ತದೆ ಎಂದೇ?

ಶಂಕರ—ಅದು ನಮ್ಮನ್ನು ತಪ್ಪಿಸುವುದಕ್ಕೆ ಆಡಿದ ಮಾತಾಗಿರಬಹುದು. ಎಷ್ಟು ಜನ ಸರಳವಾಗಿರುತ್ತಾರೆ ಈ ಜಗತ್ತಿನಲ್ಲಿ? ಜನ ಆಡುವ ಪ್ರತಿಯೊಂದು ಮಾತನ್ನೂ ನಾವು ನಂಬಿ ಕುಳಿತರೆ ಬದುಕುವುದೇ ಕಷ್ಟವಾದೀತು. ನೀನೇಕೆ ಇಷ್ಟು ಕಂಗಾಲಾಗುತ್ತೀಯಾ! ದೇವರ ಇಚ್ಛೆ ಇದ್ದ ಹಾಗೆ ಆಗುತ್ತದೆಯಲ್ಲಾ?

ವಸಂತಿ—ದೇವರ ಇಚ್ಛೆ, ದೇವರ ಇಚ್ಛೆ ಎಂದು ಪ್ರತಿಯೊಂದನ್ನು ಮುಂದಕ್ಕೆ ತಳ್ಳಿ ಇಷ್ಟೆಲ್ಲದಕ್ಕೆ ಅವಕಾಶ ಮಾಡಿಕೊಂಡದ್ದು? ಆ ದಿವಸ ಸದಾಶಿವ ಈ ಸೂಚನೆ ಮಾಡಿದಾಗಲೇ ಒಪ್ಪಿಕೊಂಡಿದ್ದರೆ ಈ ಯಾವ ತೊಂದರೆಯೂ ಇರುತ್ತಿರಲಿಲ್ಲ. ಅವನೂ ಮಿಲಿಟ್ರಿಗೆ ಸೇರುತ್ತಿರಲಿಲ್ಲ.

ಶಂಕರ—ಕಳೆದು ಹೋದುದಕ್ಕೆ ಯೋಚಿಸಿ ಏನು ಬಂತು? ಅಪೂರ್ವಕ್ಕೆ ಊಟಕ್ಕೆ ಬಂದವನ ಹತ್ತಿರವೇ ಆ ಮಾತನ್ನಾಡಬೇಕೆನ್ನುತ್ತೀಯಾ? ಅಲ್ಲದೆ ಆ ಸಮಯದಲ್ಲಿ ಶೇಷಗಿರಿ ಸ್ಥಿತಿ ಹೇಗಿತ್ತು? ಆಗಿನ ಕಾಲಕ್ಕೆ ನಾವು ಹಾಗೆ ಎಣಿಸಿದ್ದು ತಪ್ಪಲ್ಲ. ಈಗ ನಮ್ಮ ಸ್ಥಿತಿಯೂ ಬದಲಾಯಿತು. ಅವನದ್ದೂ ಬದಲಾಯಿತು. ಅವತ್ತಿನ ಸ್ಥಿತಿಯಲ್ಲಿ ಅವನಿದ್ದರೆ ನಾವಾದರೂ ಅನುಕೂಲದ ಸ್ಥಿತಿಯಲ್ಲಿ ಇದ್ದಿದ್ದರೆ ಬೇಡವೆಂತಲೇ ಇದ್ದೆ.

ಅವನು ಕೆಟ್ಟವನೆಂದಲ್ಲ, ಆದರೆ ಕುಲವನ್ನು ನಾವು ನೋಡಬೇಡವೇ ? ಆಗ ನೀನೂ ಹಾಗೇ ತಿಳಿದಿದ್ದೆ. ಈಗ ನನ್ನೊಬ್ಬನನ್ನು ದೂರಿ ಫಲವೇನು ?

( ಸದಾಶಿವ ಬರುತ್ತಾನೆ !)

ಸದಾಶಿವ—ಕಡೆಗೂ ಬರುತ್ತೇನೆಂದು ಹೇಳಿ ಕಳುಹಿದ್ದ ಮಹಾರಾಯ !

ಶಂಕರ—ಸಿಕ್ಕಿದನೇ ? ಅವನ ಮರ್ಜಿ ಏನೆಂದಾದರೂ ತಿಳಿಯಿತೇ?

ಸದಾಶಿವ—ಮರ್ಜಿ ತಿಳಿಯುರಿವುದೇನು ? ಕಾಣಲಿಕ್ಕೆ ಸಿಕ್ಕಿದರಲ್ಲವೇ ಮರ್ಜಿ ತಿಳಿಯುವುದು ? ಡಾಕ್ಟರರ ಮನೆಯಲ್ಲಿ ಗಟ್ಟಿಯಾಗಿ ಕುಳಿತಿದ್ದಾನೆ. ಅವನ ತಮ್ಮನ ಕೈಯಲ್ಲಿ ಚೀಟಿ ಕೊಟ್ಟು ಕಳುಹಿಸಿದೆ. ಉತ್ತರ ಹೇಳಿ ಕಳುಹಿಸಿದ: “ ನೀನು ಕಾದಿರುವುದು ಬೇಡ, ನಿಮ್ಮ ಮನೆಗೆ ಬರಬೇಕಾದರೆ ಆಮಂತ್ರಣ ಬೇಕೇ ? ಇನ್ನರ್ಧಗಂಟೆಯಲ್ಲಿ ಬರುತ್ತೇನೆ ” ಎಂದಿದ್ದಾನೆ. ಇನ್ನೇನು ಬರುವಂತಾಯಿತು ಬಂದಾನು.

ವಸಂತಿ— ಅಷ್ಟಿದ್ದರೆ ಸಾಕು.

ಶಂಕರ— ಏನು ಸಾಕೇ ? ಅವನು ಒಪ್ಪುವುದು ಗಿಪ್ಪುವುದು ಬೇಡವೇ ?

ಸದಾಶಿವ—ನನಗೆ ಅಪ್ಪಾ ಅವನು ತನ್ನ ಕಾಗದದಲ್ಲಿ ಬರೆದ ಹಾಗೆ ಅವನು ಸದ್ಯ ಲಗ್ನ ಆಗುವವನಲ್ಲವೆಂದೇ ಕಾಣುತ್ತದೆ. ಡಾಕ್ಟರರಲ್ಲಿ ಅವನ ಅಪ್ಪ ಬಂದರೂ ಬಗ್ಗಿಸಲಾರರು ಅವನನ್ನು. ಯುದ್ಧ ಮುಗಿದು ತನಗೂ ದೇಶಕ್ಕೂ ಶಾಂತಿ ಬಂದ ಮೇಲೆ ಸಮನಾದ ಲಗ್ನದ ಯೋಚನೆ ಎಂದು ವಿವರಿಸಿ ಬರೆದಿದ್ದ.

ಶಂಕರ—ಒಂದು ದೃಷ್ಟಿಯಿಂದ ಅವನು ಎನ್ನುವುದು ಸಮನೇ. ಈಗ ಅವನು ಲಗ್ನ ಮಾಡಿಕೊಳ್ಳಬೇಕೆಂದಿಲ್ಲ. ಅವನು ಖಂಡಿತವಾಗಿ ಒಪ್ಪಿಕೊಂಡು ಹೋದರೂ ಸಾಕು. ಅವಳಿಗಾದರೂ ಸಂತೋಷವಾದೀತಲ್ಲಾ ?

ಸದಾಶಿವ—ನನಗೂ ಹಾಗೆ ಕಾಣಿಸುತ್ತದೆ. ಆದರೆ ಆ ಮಾತು ಶ್ರೀಮತಿಯಿಂದಲೇ ಬಂದರೆ ಒಳ್ಳೆಯದು. ನಾನೂ ಅವಳಿಗೆ ಹೇಳಿದ್ದೇನೆ- ದಾಕ್ಷಿಣ್ಯವಿಲ್ಲದೆ ಅವನೊಡನೆ ಸ್ಪಷ್ಟವಾಗಿ ಮಾತನಾಡಬೇಕೆಂದು ಹೇಳಿ

ದ್ದೇನೆ. ಮೂರನೆಯವರ ವಕಾಲತೇ ಬೇಡ. ಇಂಥ ವಿಷಯದಲ್ಲಿ ಒತ್ತಾಯ, ದಾಕ್ಷಿಣ್ಯಗಳು ಪ್ರಯೋಜನವಿಲ್ಲ.

ಆದರೆ ಅಪ್ಪಾ, ಅವಳು ಇಷ್ಟೆಲ್ಲ ನಮ್ಮ ಹತ್ತಿರ ಅತ್ತು ಹೇಳಿದ್ದಾಳೇ ಹೊರತು ಅವನಿಗೆ ಈ ಸಂಗತಿಯನ್ನು ತಿಳಿಸಿಯೇ ಇಲ್ಲ. ನಾನು ಒಂದೆರಡು ಸಾರಿ ಸೂಚನೆಯ ಮಾತಾಗಿ ಅಂದಿದ್ದೆ. ಅವನು ಉತ್ತರ ಕೊಡಲಿಲ್ಲ. ಇಷ್ಟು ದಿನ ನೀವಿಬ್ಬರೂ ಕುಲ, ಕುಲ ಎಂದು ಕುಣಿದಿರಿ. ಕೈಯಲ್ಲಿ ಇದ್ದುದನ್ನು ಬಿಟ್ಟು, ಹಾರುವ ಹಕ್ಕಿಯನ್ನು ಹಿಡಿದ ಹಾಗೆ ಈ ಯೋಚನೆ.

ಶಂಕರ—ಮಗೂ ಮುಂದಿನದನ್ನೇ ಕಾಣಬೇಕು ಹೊರತು ಕಳೆದುದನ್ನು ಯೋಚಿಸಿ ಫಲ ಉಂಟೇ?

ಸದಾ—ಇಷ್ಟಾದರೂ ಮಾಡಿಸಬಹುದಿತ್ತಲ್ಲಾ? ಅವರು ಮಾಡಿದ ಹಾಗೆಯೇ ಅವನಿಗೆ ಶ್ರೀಮತಿಯಿಂದ ಕಾಗದವನ್ನಾದರೂ ಬರೆಯಿಸಬಹುದಿತ್ತು. ಅವಳ ಮಾತಿಗೆ ಖಂಡಿತ ಬೆಲೆ ಬರುತ್ತಿತ್ತು. ನನಗೆ ಶೇಷಗಿರಿ ಹತ್ತಿರ ಮಾತನಾಡಿದುದರಿಂದಲೇ ಎಲ್ಲಾ ತಿಳಿಯಿತು. ಆ ಹುಡುಗಿಗೂ ಅವನಿಗೂ ಐದಾರು ತಿಂಗಳಿನಿಂದ ಪತ್ರವ್ಯವಹಾರ ನಡೆಯುತ್ತಿತ್ತು.

ಶಂಕರ—ಹದಿನೈದು ದಿವಸದ ಕೆಳಗೆ ಶೇಷಗಿರಿ ನಮಗೂ ಬಂದು ಹೇಳಿದ. ಡಾಕ್ಟರು ಕಾಗದ ಬರೆದಿದ್ದಾರೆ, ಬರಲಿಕ್ಕೆ ತಂತಿ ಕೊಟ್ಟಿದ್ದಾರೆ. ಅದರಿಂದ ಗಾಬರಿಯಾಗಿ ನಿನಗೂ ತಂತಿ ಕೊಟ್ಟೆರು.

ಸದಾ—ಬರಿಯ ಡಾಕ್ಟರು ಒಬ್ಬರೇ ಅಲ್ಲ ಬರೆದುದು. ಸೀಮಂತಿನಿಯೂ ಬರೆದಿದ್ದಾಳೆ. ಅವಳ ಫೋಟೋ ಅಲ್ಲಿಗೆ ಹೋಗಿದೆ. ಅವನ ಫೋಟೋ ಇಲ್ಲಿಗೆ ಬಂದಿದೆ. ಶೇಷಗಿರಿಯ ಮಾತಿನ ಧೋರಣೆಯಿಂದ ಅದೆಲ್ಲ ನನಗೆ ಕಂಡಿತು. ಹಾಗಾಗಿ ಅವನ ಒಲವು ಅವಳ ಕಡೆಗೆ ತಿರುಗಿದರೂ ತಿರುಗಬಹುದು. ನಾವಿಷ್ಟು ದಿನ ಸುಮ್ಮನಿರುವಾಗ ನಮ್ಮ ಆಸೆ ಅವನಿಗೆ ಹೇಗೆ ಗೊತ್ತಾಗಬೇಕು? ಒಂದ ನೆಂಟಸ್ತಿಕೆ ಬಿಟ್ಟು ಬಿಡುತ್ತಾನೆಯೆ?

ಶಂಕರ— ಹಾಗಿದ್ದರೆ ಲಕ್ಷ್ಮಣ ರಾಮರಾಯರಿಗೆ ಮಾತು ಕೊಟ್ಟೆ

ಕಲೂ ಸಾಕು. ನಮ್ಮ ಪ್ರಯತ್ನ ವ್ಯರ್ಥವೆಂದಹಾಗಾಯಿತಲ್ಲಾ ಬಂದರೆ ಬಂದದ್ದಕ್ಕೆ ಒಂದಿಷ್ಟು ಉಪಚಾರ ಮಾಡುವುದು.

ಸದಾ—ಅವನು ಇಷ್ಟರಲ್ಲಿಯೇ ಏನೂ ನಿಶ್ಚಯ ಮಾಡಿರಲಾರ. ಯುದ್ಧ ಮುಗಿಯುವ ತನಕ ಲಗ್ನದ ವಿಚಾರ ಬೇಡವೆಂದು ನನಗೆ ಬರೆದಿರ ಲಿಲ್ಲವೇ? ಅಲ್ಲಿಯ ತನಕ ಕಾದಿರುವ ಜನರು ಡಾಕ್ಟರರಾಗಲೀ, ಸುಲೋಚನಾಬಾಯಿ ಆಗಲೀ ಅಲ್ಲ. ಅಷ್ಟು ಪುರುಸೊತ್ತಿನವರಾದರೆ ಮೇಲಿಂದ ಮೇಲೆ ತಂತಿ ಬಿಡುತ್ತಿದ್ದರೇ? ಯಾಕೆ ಅವನೇ ಬಂದನಲ್ಲಾ? ಅಮ್ಮಾ ಕಾಫಿಯನ್ನೋ, ಟೀಯನ್ನೋ ಏನಾದರೂ ಮಾಡು.

( ಸೈನಿಕನ ಉಡುಗೆಯಲ್ಲಿ ಲಕ್ಷ್ಮಣ ಪ್ರವೇಶಿಸುತ್ತಾನೆ. )

ಏನು ಕ್ಯಾಪ್ಟನ್ ಸಾಹೇಬರೇ? ಊರಿಗೆ ಬಂದದ್ದಕ್ಕೆ ನಿನ್ನನ್ನು ಕಾಣಲು ಇಷ್ಟು ಪ್ರಯಾಸವಾದರೆ ಹೇಗೆ?

ಲಕ್ಷ್ಮಣ— ನೀನು ಬಂದದ್ದು ನನಗೆ ಬೆಳಿಗ್ಗೆ ಗೊತ್ತಾಯಿತಷ್ಟೆ. ಸುಧಾಕರನೂ ಕೇಳಿದ ಸದಾಶಿವನು ಯಾಕೆ ಬಂದದ್ದಂತೇ? ಎಂದು.

ಸದಾ—ನಾನು ನಿನ್ನೆ ಸಂಜೆ ನಿನ್ನ ತಂದೆ ಹತ್ತಿರ, ತಮ್ಮನ ಹತ್ತಿರ ನಿನಗೆ ಸುದ್ದಿ ತಿಳಿಸುವುದಕ್ಕೆ ಹೇಳಿ ಬಂದಿದ್ದೆ.

ಲಕ್ಷ್ಮಣ—ನಾನು ನಿನ್ನೆ ಮೊನ್ನೆ ಎಲ್ಲಾ ಬಂದಿವಾಸದಲ್ಲಿದ್ದೆ.

ಶಂಕರ—ಬಾ ಲಕ್ಷ್ಮಣ, ಕೂತುಕೊ.

ಲಕ್ಷ್ಮಣ—ನಮಸ್ಕಾರ ರಾಯರೇ! ಅಮ್ಮ ಎಲ್ಲಿ?

ಶಂಕರ—ಒಳಗೆ ಹೋಗಿದ್ದಾಳೆ.

ಲಕ್ಷ್ಮಣ— ಕಾಫಿಗೀಫಿ ಬೇಡ.

ಶಂಕರ—ಏನಾಗುತ್ತದೆ ಸ್ವಲ್ಪ ಕುಡಿದರೆ? ನಾನೀಗ ಬರುತ್ತೇನೆ. ನೀವು ಮಾತನಾಡುತ್ತಾ ಇರಿ. ( ಎಂದು ತೆರಳುವನು. )

ಸದಾ—ಬಂದಿವಾಸ ಅಂದರೆ?

ಲಕ್ಷ್ಮಣ— ಡಾಕ್ಟರ ಮನೆಯಲ್ಲೇ ಇದ್ದೆ. ಅವರ ಉಪಚಾರ ಒತ್ತಾಯದಲ್ಲಿ ಹೊರಕ್ಕೆ ಹೊರಡುವುದೇ ಆಗಲಿಲ್ಲ. ನೀನು ಯಾವಾಗ

ಬಂದೆ? ಏನು ಬಂದೆ? ನಾನು ಬಂದವ ಇಲ್ಲಿಗೆ ಬಾರದೇ ಹೋಗುತ್ತೇನೆಂದು ತಿಳಿದೀಯಾ? ಇಷ್ಟೆಲ್ಲ ಪತ್ರವ್ಯವಹಾರ ಓಡಾಡಿದ ಮೇಲೆ?

ಸದಾ—ಲಕ್ಷ್ಮಣ, ನೀನು ಹೇಗೆ ತಂತಿಯ ಕರೆಗೆ ಬಂದಿಯೋ, ನಾನೂ ತಂದೆಯವರ ತಂತಿ ಕಂಡು ಬಂದೆ. ನೀನು ಬರುತ್ತೀ ಆದ್ದರಿಂದ ನಾನು ಬರಲು ಒತ್ತಾಯ ಮಾಡಿದೆ. ಆದರೂ ರಜೆ ಸಿಗದೆ ಎರಡು ದಿವಸದ ಹಿಂದೆ ಬರಬೇಕಾದವನು ನಿನ್ನೆ ಬಂದೆ.

ಲಕ್ಷ್ಮಣ—ನಿನಗೆ ಮರುಳು. ನನಗಾಗಿ ಬರಬೇಕಿತ್ತೇ? ಸದ್ಯ ನೀವೇನನ್ನೂ ಯೋಚಿಸಬಾರದೆಂದು ಅಷ್ಟೆಲ್ಲ ಕಾಗದ ಬರೆದಿದ್ದೆನಲ್ಲವೇ?

ಸದಾ—ಇನ್ನು Statusquo ಅನ್ನುತ್ತೀಯಾ?

ಲಕ್ಷ್ಮಣ— Statusquoವೋ retreat ಆಮೇಲೆ, ಓ!, ನಾನು ನಿನಗೆ ಬರೆದದ್ದು ನನ್ನ ನಿಜವಾದ ಸ್ಥಿತಿ. ನಿಮಗೇನು ಸದಾ, ಮಶಿನ್‌ಗನ್, ಬ್ರೆಂಡ್‌ಗನ್ ಎದುರಿಗೆ ನಿಂತು ಜೀವ ಕೊಡಲು ನಿಂತವನ ಕೊರಳಿಗೆ ಮಾಲೆ ಹಾಕಿಸುವ ಹುಚ್ಚುತನ ಏನಿದು? ನನಗಾದರೂ ಯೋಚನೆ ಬೇಡವೇ? ಯುದ್ಧ ಮುಗಿಯಬೇಡವೇ?

ಸದಾ—ಆಮೇಲಾದರೂ?

ಲಕ್ಷ್ಮಣ—ಆಮೇಲೆ ಬದುಕಿ ಉಳಿದರೆ ಒಂದು ಲೆಕ್ಕ. ಸತ್ತರೆ ಇನ್ನೊಂದೇ ಲೆಕ್ಕ.

ಸದಾ—ಏನು ಮಾಡಬೇಕೆನ್ನುತ್ತೀಯಾ?

ಲಕ್ಷ್ಮಣ—ಏನೂ ಮಾಡಬೇಡ ನೀನು. ಈಗ ಯಾರೂ ಏನೂ ಮಾಡುವ ಹಾಗಿಲ್ಲ. ಎಲ್ಲಾ ತಣಿದ ಮೇಲೆ ವಿಚಾರ ಮಾಡಬೇಕು. ನಾನು ಮೊದಲು ಶ್ರೀಮತಿಯನ್ನು ಕಾಣಬೇಕು. ಎಷ್ಟೋ ಸಮಯದಿಂದ ಅವಳನ್ನು ಕಂಡು ಮಾತನಾಡುವುದಕ್ಕೆ ಆಸೆ ಮಾಡಿದ್ದೆ. ಅವಳ ಹತ್ತಿರವೇ ಎಲ್ಲಾ ಸ್ಥಿತಿಯನ್ನು ವಿವರಿಸುತ್ತೇನೆ. ಅವಳ ಮನಸ್ಸಿಗೆ ನಾನು ಖಾತ್ರಿ ಮಾಡಿಕೊಟ್ಟರೆ ಆಯಿತಲ್ಲಾ? ನನಗೆ ಹೆಚ್ಚು ವೇಳೆ ಇಲ್ಲ. ನಾನಿರುವುದು ಒಂದು ದಿನವೋ, ಎರಡು ದಿನವೋ. front ಗೆ ಹೊರಡುವುದಕ್ಕೆ ಯಾವ ಗಳಿಗೆಯಲ್ಲಿ ತಂತಿ ಬಂದರೂ ಬಂದೀತೆ?

ಸದಾ—ಹಾಗಿದೆಯೇ? I am sorry

ಲಕ್ಷ್ಮಣ—ವ್ಯಥೆ ಯಾಕೆ? ಯುದ್ಧವೆಂಬುದೇ a sorry tale. ಅಲ್ಲದೆ ಈ ಮದುವೆಯ ಪ್ರಸ್ತಾಪ ಇನ್ನೊಂದು sorry tale.

ಸದಾ—ಶ್ರೀಮತಿಯನ್ನು ಕರೆಯಲೇ? ( ಈಚೆ ಬಂದು ಲಕ್ಷ್ಮಣನ ಬಾಯಿ ವಾಸನೆ ಬರುತ್ತದೆಯಲ್ಲಾ .... ) ಶ್ರೀಮತಿ? ಲಕ್ಷ್ಮಣ ಬಂದಿದ್ದಾನೆ ಬಾ ನೋಡು.

( ಅವಳು ಬಂದು ಲಕ್ಷ್ಮಣನನ್ನು ವಂದಿಸುತ್ತಾಳೆ. )

ಲಕ್ಷ್ಮಣ—Good morning ಶ್ರೀಮತಿ. ಏನು ಮೈ ಚೆನ್ನಾಗಿಲ್ಲವೇ? ನೀನು ಎಷ್ಟು ಉದ್ದವಾಗಿಬಿಟ್ಟಿದ್ದೀಯ?

ಸದಾ—ಅದರಲ್ಲೇನು ಆಶ್ಚರ್ಯ? ನಿನ್ನ ಸಲುವಾಗಿ ಕತ್ತು ನೀಡಿ ನೀಡಿ ಎಷ್ಟು ಉದ್ದವಾಗಿಬಿಟ್ಟಿದ್ದಾಳೆ!

ಲಕ್ಷ್ಮಣ— ಹುಚ್ಚು ಮಾತು. ಸದಾ, ಸ್ವಲ್ಪ ಮಾತನಾಡಲಿಕ್ಕಿದೆ. ಆ ಕದ ಹಾಕು. ನಿನಗೆ ಬೇಸರವಿಲ್ಲದೆ ಹೋದರೆ ಹತ್ತು ನಿಮಿಷ ಕಾಲ, ನಾಟಕ ಅದಲ್ಲಿ ಹೇಳುವ ಹಾಗೆ ನಿಷ್ಕ್ರಮಿಸು.

ಸದಾ—ನಿಜ. ಎಲ್ಲವನ್ನೂ ಅವಳಿಗೆ ತಿಳಿಸು. ನಾನು ಇಲ್ಲಿ ಹೊರಗೆಯೇ ಇರುತ್ತೇನೆ. ನಿಮಗೆ ಶುಭವಾಗಲಿ.

ಲಕ್ಷ್ಮಣ—ಯಾರು ಅದಕ್ಕೆ ತಕ್ಕವರೋ ಅದಕ್ಕೆ ಶುಭವನ್ನು ಕೋರು. ( ಸದಾ ತೆರಳುವನು. ) ಬಾ, ಅಮ್ಮಾ ಕುಳಿತುಕೊ. ( ಅವಳು ನಿಂತೇ ಇರುತ್ತಾಳೆ. ) ಯಾಕೆ ದಾಕ್ಷಿಣ್ಯ ಮಾಡುತ್ತೀಯಾ? ಈಗ ನಿನ್ನ ಹತ್ತಿರ ಮಾತನಾಡುವುದಕ್ಕೆಂದೇ ಬಂದಿದ್ದೇನೆ. ನಿನ್ನ ಅಣ್ಣನ ಪತ್ರ ತಂದೆಯ ಪತ್ರ ಎಲ್ಲವೂ ಬಂದಿದ್ದುವು.

ಶ್ರೀಮತಿ—ತಂದೆ ಹೇಳಿದ್ದರು.

ಲಕ್ಷ್ಮಣ—ನೀನು ಮಾತ್ರ ಬರೆಯಲಿಲ್ಲ.

ಶ್ರೀಮತಿ— ನಾನು ಬರೆಯಬೇಕಿತ್ತೇ? ನಾನು ಅದನ್ನು ನನ್ನ ಹೃದಯದಲ್ಲೇ ಬರೆದಿದ್ದೇನೆ.

ಲಕ್ಷ್ಮಣ— ಅದನ್ನೀಗ ಉಜ್ಜುವುದಕ್ಕೆಂದೇ ಬಂದಿದ್ದೇನೆ. ಬಾ ಸಮೀಪ ಬಾ. ಕುಳಿತುಕೊ. ನನಗೆ ನಿನ್ನ ಹತ್ತಿರ ಮಾತನಾಡಬೇಕೆಂದು

ಬಹುದಿನಗಳಿಂದ ಇತ್ತು. ನನ್ನ ಕಲ್ಪನೆಯನ್ನು ನೀನು ಮನಸ್ಸಿನಲ್ಲಿ ತುಂಬಿಕೊಂಡಿದ್ದೀ ಎಂಬುದು ನನಗೆ ಹೇಗೆ ತಿಳಿಯಬೇಕು?.... ಕ್ಷಮಿಸು. ನನ್ನ ಬಾಯಿ ವಾಸನೆ ಬರುವುದಿಲ್ಲವೇ? ಏನೆಂದು ಗೊತ್ತಾಯಿತಲ್ಲ?

ಶ್ರೀಮತಿ—ನಾನು ಅದನ್ನು ಯೋಚಿಸಲಿಲ್ಲ.

ಲಕ್ಷ್ಮಣ—ಅದೂ ಯೋಚಿಸಬೇಕಾದ ಸಂಗತಿಯೇ.

ಶ್ರೀಮತಿ—ನನಗೆ ಅಂಥದೆಲ್ಲ ಬೇಡ.

ಲಕ್ಷ್ಮಣ—ಮತ್ತೇನು ಬೇಕು ನಿನಗೆ?

ಶ್ರೀಮತಿ—ನಾನು ತಿರುತಿರುಗಿ ಹೇಳಬೇಕೇ?

ಲಕ್ಷ್ಮಣ—ನಿನ್ನ ಅಣ್ಣನ ಪತ್ರದಿಂದ ನನ್ನನ್ನೇ ಮದುವೆಯಾಗುವ ಹಟ ಹಿಡಿದಿದ್ದೀ ಎಂದು ಕೇಳಿದೆ. ನಿಜವೇ? ಎಷ್ಟು ದಿನದಿಂದ ನಿನ್ನದು ಈ ಹುಚ್ಚು?

ಶ್ರೀಮತಿ—ಆ ದಿನ ಅಣ್ಣ ನಿನ್ನನ್ನೂ ನನ್ನನ್ನೂ ಚುಚ್ಚಿ ಮಾತನಾಡಿದಂದಿನಿಂದ.

ಲಕ್ಷ್ಮಣ—ನಾನು ನಿನಗೆ ಋಣಿಯೇ. ಅವರು ಅಷ್ಟೆಲ್ಲ ನನ್ನನ್ನು ನಿಂದಿಸಿ ದೂರ ಮಾಡಿದರೂ ನೀನು ನನ್ನನ್ನು ಪ್ರೀತಿಯಿಂದಲೇ ಕಂಡೆ. ಆ ಪ್ರೀತಿಯನ್ನು ನಾನು ಮರೆಯಲಾರೆ. ಆದುದರಿಂದ ನಿನ್ನ ವಿಷಯದಲ್ಲಿ ನಿನ್ನ ಹಿತಕ್ಕಾಗಿ ನಾನು ಬಾಳಬೇಕೂ. ನಿನ್ನ ವಿಷಯದಲ್ಲಾದರೂ ಪ್ರಾಮಾಣಿಕನಾಗಿ ಇರಬೇಕೂ ಎಂಬುದು ನನ್ನ ಅಪೇಕ್ಷೆ

ಶ್ರೀಮತಿ—ನನ್ನ ಅಪೇಕ್ಷೆಯೂ ಹಾಗೇ.

ಲಕ್ಷ್ಮಣ—ಆದರೆ ನನ್ನ ಪ್ರಾಮಾಣಿಕತೆ ಕಾರ್ಯರೂಪದಲ್ಲಿ ಬರುವಾಗ ಅದು ನಿನ್ನ ಅಪೇಕ್ಷೆಯ ಹಾದಿಯನ್ನು ಹಿಡಿಯಲಾರದು.

ಶ್ರೀಮತಿ — ನಾನು ಬೇಕಾದರೆ ಕಾದಿರುತ್ತೇನೆ, ಯುದ್ಧ ಮುಗಿದಿರುವ ತನಕ.

ಲಕ್ಷ್ಮಣ—ನೀನೇನೂ ತಿಳಿಯದವಳು. ಯಾರಿಗಾಗಿ ಕಾದಿರಬೇಕು ನೀನು? ಪ್ರಯೋಜನಕ್ಕೆ ಬರುವ ವಸ್ತುವಿಗಾಗಿ ಕಾದಿರಬಹುದು. ಮನ್ನಣೆಗೆ ಯೋಗ್ಯವಾದ ಒಂದು ಜೀವವಿದ್ದರೆ ಅದಕ್ಕಾಗಿ ಕಾದಿರ

ಬಹುದು. ನೀನು ಚಿಕ್ಕವಳು. ನಾಲ್ಕೈದು ವರ್ಷ ಕಾಯುವುದೂ ಅಷ್ಟು ದೊಡ್ಡ ಕೆಲಸವಲ್ಲ. ಆದರೆ ನನ್ನ ಸಲುವಾಗಿ ಕಾಯಬೇಕೆ? ಸಾವಿನೊಡನೆ ಆಟವಾಡುತ್ತಿರುವವನು ನಾನು. ನನ್ನ ಇಂದಿನ ಜೀವನ ಬದಲಾಗಿದೆ.... ನನ್ನ ಬಾಯಿ ವಾಸನೆ ಏನೂ ಹೇಳುವುದಿಲ್ಲವೇ ನಿನಗೆ? ಗೊತ್ತು, ಗುರಿ, ಹಿಡಿತ, ಹತೋಟಿಗಳಿಲ್ಲದ ಬಾಳ್ವೆ ನನ್ನದು. ನನಗೆ ಬದುಕುವ ಆಶೆಯೂ ಇಲ್ಲ. ಮದುವೆಯಾಗುವ ಅಪೇಕ್ಷೆಯೂ ಇಲ್ಲ. ನಾನು ಇಷ್ಟು ದಿನ ಬದುಕಿದ್ದುದಾದರೆ ಯಾವುದೋ ಒಂದು ಸೇಡಿಗೆ ಬದುಕಿದ್ದೆ. ಆ ಬಯಕೆ ಪೂರ್ಣವಾಯಿತು. ನಾನೇ ಅದನ್ನು ಪೂರ್ಣ ಮಾಡದಿದ್ದರೂ ನನ್ನಿಂದ ಅಷ್ಟು ಮಾಡಿಸಿಕೊಂಡರು. ನಿಶ್ಚಯಕ್ಕೂ ನನಗೆ ಬಹು ದಿನ ಬಾಳಬೇಕೆಂಬ ಅಪೇಕ್ಷೆಯೇ ಇಲ್ಲ. ನಿನಗೆ ನನ್ನ ಮನಸ್ಸು ವಂಚನೆ ಇಲ್ಲದೆ ಬಿಚ್ಚಿ ಹೇಳುತ್ತೇನೆ. ನಾನು ಈ ಬಾರಿ ಯುದ್ಧರಂಗಕ್ಕೆ ಹೋದರೆ ಹಿಂದಕ್ಕೆ ಬರುವ ಅಪೇಕ್ಷೆಯನ್ನೂ ಇಟ್ಟುಕೊಂಡಿಲ್ಲ; ಬರುವ ಧೈರ್ಯವೂ ಇಲ್ಲ.

ಶ್ರೀಮತಿ—(ಅಳುತ್ತಾಳೆ.)

ಲಕ್ಷ್ಮಣ—ತಂಗಿ, ಅಳಬೇಡ. ನೀನು ನನ್ನ ತಂಗಿಯೂ ಅಹುದು. ತಾಯಿಯೂ ಅಹುದು. ನೀನು ಚಿಕ್ಕವಳಿರುವಾಗ ನಿನ್ನನ್ನು ಎತ್ತಿ ತಿರುಗಾಡಿಸುತ್ತಿದ್ದುದು ನೆನಪಿದೆಯೇ? ಒಂದು ದಿನ ನೀನು ಜೇಷ್ಟೆಗೆ ನನ್ನೊಡನೆ "ನಾನು ತಾಯಿ ನೀನು ಮಗು" ಎಂದು ಹಾಲಿನ ಸೀಸೆಯನ್ನು ನನ್ನ ಬಾಯಿಗೆ ಹಿಡಿದ ಚಿತ್ರವನ್ನು ಎಂದೂ ಮರೆಯಲಾರೆ. ಆ ಮಾತೇ ಸತ್ಯವಾಗಬೇಕೆಂದು ನನ್ನ ಅಪೇಕ್ಷೆ.

ಶ್ರೀಮತಿ—ಏನು ಲಕ್ಷ್ಮಣ ಇದು! ಹೀಗೇಕೆ ಮಾತನಾಡುತ್ತೀಯಾ? ನನಗೆ ತಿಳಿಯದು!

ಲಕ್ಷ್ಮಣ— ನನಗೂ ಹೇಳುವುದು ಕಷ್ಟವಾಗಿದೆ. ಆದುದರಿಂದ ಎಲ್ಲವನ್ನೂ ನಿನಗೆ ಹೇಳಬೇಕಾಗಿ ಬಂದಿದೆ. ನನ್ನ ಕೈ ಬೆರಳನ್ನು ನೋಡು.

ಶ್ರೀಮತಿ— (ಅವನ ಕೈಬೆರಳಿಗಿರುವ ಉಂಗುರವನ್ನು ನೋಡುತ್ತಿರುತ್ತಾಳೆ.)

ಲಕ್ಷ್ಮಣ—ಚೆನ್ನಾಗಿಲ್ಲವೇ? ಸಾವಿರ ರೂಪಾಯಿ ಕೊಟ್ಟು ಕೊಂಡಿದ್ದಾರೆ.

ಶ್ರೀಮತಿ—ಕೊಂಡಿದ್ದಾರೆ ?

ಲಕ್ಷ್ಮಣ— ಮತ್ತೇ ? ಭಿಕಾರಿಯಾದ ನಾನು ಕೊಳ್ಳುವವನೇ ? ನನ್ನ ಹೊಸ ಸಮ್ಮಂಧಿಕರ ಉಡುಗೊರೆ ಇದು.

ಶ್ರೀಮತಿ—ನಿಶ್ಚಯವಾಯಿತೇ ?

ಲಕ್ಷ್ಮಣ—ಅವರು ಸುಮ್ಮನೆ ಬಿಟ್ಟಾರೆಯೇ? ಶ್ರೀ, ಸಿಟ್ಟಾಗಬೇಡ. ನಿನ್ನ ಮೇಲಿನ ಪ್ರೀತಿಯಿಂದಲೇ ನಿನ್ನೆಯ ದಿನ ಬೇರೆ ಲಗ್ನವಾದ.

ಶ್ರೀಮತಿ—ಚೇಷ್ಟೆ ಮಾಡಬೇಡ ಲಕ್ಷ್ಮಣ! ನನ್ನನ್ನು ದುಃಖಕ್ಕೆ ಗುರಿ ಮಾಡಬೇಡ!

ಲಕ್ಷ್ಮಣ—ನಾನು ಇದನ್ನೆಲ್ಲ ಹೇಳುವಾಗ ದುಃಖ ಬಂದೀತು. ಇದನ್ನು ಹೇಳುವುದಕ್ಕೆ ನಿನಗಿಂತ ಹೆಚ್ಚಿನ ದುಃಖ ನನಗೆ. ನಾನು ಚೇಷ್ಟೆ ಮಾಡುತ್ತಲಿಲ್ಲ. ನನ್ನ ಜೀವನವೇ ಅಪಹಾಸವಾಗಿರುವಾಗ ನಾನೇನು ಚೇಷ್ಟೆಮಾಡುತ್ತೇನೆ? ಇದೋ ನೋಡು ನನ್ನ ಮದುವೆಯ ಉಂಗುರ! ಸೀಮಂತಿನಿ ನನ್ನ ಬೆರಳಿಗೆ ತೊಡಿಸಿದ್ದು. ನಿನ್ನೆಯ ದಿನ ಗುಪ್ತವಾಗಿ ನಮಗೆ ರಜಿಸ್ಟರ್ಡ ಲಗ್ನವಾಯಿತು.

ಶ್ರೀಮತಿ—( ಅಳುತ್ತಾಳೆ. )

ಲಕ್ಷ್ಮಣ—ನೀನು ಅಳಬಾರದು. ಅತ್ತರೆ ನನ್ನಾಣೆ ಇದೆ. ನಿನ್ನ ದುಃಖವನ್ನು ಕಂಡು ನನ್ನಿಂದ ಮುಂದೆ ಹೇಳದಾಗದು. ಎಲ್ಲಾ ಹೇಳಿ ಮುಗಿಸಿದ ಮೇಲೆ ಇಬ್ಬರೂ ಕೂಡಿಯೇ ಅಳೋಣವಂತೆ. ನಿನ್ನ ಪಾಲಿಗೆ ನಾನು ಅನ್ಯಾಯ ಮಾಡಿದ್ದೇನೆಂದು ನಿನಗೆ ಅನಿಸುತ್ತಿರಬೇಕು. ಹಾಗಿಲ್ಲ. ನನ್ನನ್ನು ಕೇಳಿದರೆ ಎಲ್ಲಾ ತಿಳಿದೀತು. ಹೇಳಲೇ ?

ಶ್ರೀಮತಿ—ಹೇಳು. ಇನ್ನೇನನ್ನೂ ಕೇಳಬಹುದು. ನನ್ನ ಆಸೆ ಮುಗಿಯಿತಲ್ಲಾ ?

ಲಕ್ಷ್ಮಣ— ನಿನ್ನ ಆಸೆಯನ್ನು ಬಿಡಿಸುವುದಕ್ಕೇನೇ ಬಂದಿದ್ದೇನೆ.... ಅದೂ ನಿನ್ನ ಮೇಲಿನ ಪ್ರೀತಿಯಿಂದ.

ಶ್ರೀಮತಿ—ಎಂಥ ಪ್ರೀತಿ! ಪ್ರೀತಿಯನ್ನು ಅಪಹಾಸ ಮಾಡಬೇಡ. ನಾನಿನ್ನು ಹೋಗುತ್ತೇನೆ. ನನ್ನ ಪಾಲಿಗೆ ಇನ್ನು ಕಗ್ಗತ್ತಲೆ! ನೀವಾದರೂ ಸುಖವಾಗಿರಿ!

ಲಕ್ಷ್ಮಣ—ದಯವಿಟ್ಟು ಹೋಗಬೇಡ. ನಾನು ನಿನ್ನ ಅಣ್ಣನೆಂದಾದರೂ ತಿಳಿ; ನಿನ್ನ ಕೂಸು ಎಂದಾದರೂ ತಿಳಿ. ನನ್ನ ಮೇಲೆ ನಿನ್ನ ದಯೆ ಸದಾ ಇರಲಿ. ನಿನ್ನ ಆಸೆಯನ್ನು ಮುರಿದ ಅಪರಾಧ ನನ್ನದು ಬಲ್ಲೆ. ಹಿಂದುಮುಂದನ್ನು ತಿಳಿದೇ ಆ ಅಪರಾಧ ಮಾಡಿದ್ದೇನೆ. ಇನ್ನೂ ಹೆಚ್ಚಿನ ಅಪರಾಧ ಮಾಡಬಾರದೆಂದು ನನ್ನ ಇಚ್ಛೆ.

ಶ್ರೀಮತಿ—ನನಗೇನು ಅಪರಾಧ ಮಾಡಿದ್ದು ನೀನು? ಆ ದಿನವೇ ನಾನು ನನ್ನ ಮನಸ್ಸನ್ನು ಬಿಚ್ಚಿ ನಿನ್ನೊಡನೆ ಹೇಳಿದ್ದರೆ ಈ ಕಷ್ಟ ಬರುತ್ತಿರಲಿಲ್ಲ. ಆದರೆ ನಾಚಿಕೆಯಿಂದ, ಮನೆಯವರ ಅಂಜಿಕೆಯಿಂದ, ಬಾಯಿ ಮುಚ್ಚಿ ಕುಳಿತೆ. ನನ್ನ ಹೃದಯದಲ್ಲಿ ಬೆಳೆದ ಆಸೆ ದೂರವಿರುವ ನಿನಗಾದರೂ ಹೇಗೆ ಗೊತ್ತಾಗಬೇಕು?

ಲಕ್ಷ್ಮಣ—ನಿನ್ನ ಅಣ್ಣ ನನ್ನನ್ನು ಮನೆಗೆ ಕರೆದು ತಂದ ದಿನ ಅಂಥದೇನೋ ಸೂಚನೆಯಾಯಿತು. ಆದರೆ ಒಂದೂವರೆ ವರ್ಷ ಕಾಲ ದೂರ ಇದ್ದ ನಾನು ಮಾತನಾಡುವುದಕ್ಕೆ ಅಂಜಿದ. ಇಷ್ಟಷ್ಟು ತೋರಿದರೆ ಮಾಡಬಾರದೆಂದು ಕುಳಿತೆ. ಆದರೆ ಆಗಲೂ ನಿನ್ನ ಅಣ್ಣ, ತಾಯಿ ನನ್ನನ್ನು ನೋಡಿದ ಬಗೆಯನ್ನು ಮರೆಯಲಾರೆ. ಯಾವ ದಿನ ನೆನಪಿದೆಯೋ? ಡಾಕ್ಟರ ಮನೆಯವರು ಲಗ್ನದ ನಿಶ್ಚಯಕ್ಕೆ ಬಂದಾಗ.

ಶ್ರೀಮತಿ— ನೆನಪಿಲ್ಲದೇ ಹೋದೀತೇ? ಅದೇ ನನಗೆ ಮೃತ್ಯುವಾಯಿತು.

ಲಕ್ಷ್ಮಣ—ಎಲ್ಲರಿಗೂ ಸರಿಯಾಗಿ ನುಡಿದೆ.

ಶ್ರೀಮತಿ— ನಿನಗೇನು, ಹಾಗೆಲ್ಲ ಹುಚ್ಚಿ ಮಾತನಾಡಿದ ಅಣ್ಣನ ಸದ್ದಡಗಿಸುವ ಯೋಗವೇ ದೊರಕಿತು. ಮರ್ಯಾದೆ ಇಲ್ಲದ ಜನರು!

ಲಕ್ಷ್ಮಣ—ಸರಿಯಾಗಿಯೇ ಹೇಳಿದೆ. ಮರ್ಯಾದೆ ಇಲ್ಲದ ಜನರೆಂದು ತೋರಿಸುವುದಕ್ಕೇನೇ ಹೀಗೆ ಮಾಡಿದೆ.

ಶ್ರೀಮತಿ–ಸಿಟ್ಟಾದಿಯಾ? ಅಣ್ಣನ ವಿಚಾರವಾಗಿ ಹೇಳಿದ್ದು, ನಿನಗಲ್ಲ.

ಲಕ್ಷ್ಮಣ— ಸಿಟ್ಟಲ್ಲ. ನನಗೂ ಅದು ಹಿಗ್ಗಿನ ಮಾತು. ಆ ದಿನ ಯಾರೆಲ್ಲ ನನ್ನನ್ನು ಮೂದಲಿಸಿದರೋ ಅವರೆಲ್ಲರ ಸೇಡನ್ನು ನನಗೆ ತೀರಿಸುವುದು ಸಾಧ್ಯವಾಯಿತು. ಅಷ್ಟೇನೇ ಸಂತೋಷ ನನಗೆ. ನನ್ನ

ಜೀವಮಾನ ಹಾಳಾಯಿತೆಂಬುದನ್ನು ಬಲ್ಲೆ.

ಶ್ರೀಮತಿ— ಲಕ್ಷ್ಮಣಾ, ನನ್ನನ್ನು ನೆನೆದು ಹೇಳುತ್ತೀಯಾ ಈ ಮಾತನ್ನು. ನನ್ನ ವಿಚಾರ ಇನ್ನು ಯಾರೂ ಯೋಚಿಸಬೇಕಿಲ್ಲ. ಆದರೆ ನಿನ್ನೆ ಲಗ್ನವಾದ ನೀನು ಇವತ್ತೇ ಜೀವಮಾನ ಹಾಳಾಯಿತು ಎನ್ನ ಬಾರದು. ಸೀಮಂತಿನಿಯೂ ನನ್ನಂತೆಯೇ ಅಲ್ಲವೇ? ಅವಳೂ ನೀನೂ ಸುಖವಾಗಿರಬೇಕು. ನನ್ನ ಅದೃಷ್ಟದಲ್ಲಿ ಬರೆಯದ ಸುಖ ಅವಳ ಪಾಲಿಗೆ ದೊರೆಯಬಾರದೇ?

ಲಕ್ಷ್ಮಣ—ಸುಖ ಇನ್ನು ಎಲ್ಲಿ ಬಂತು ಶ್ರೀ? ಯಾರಿಗೆ ಬೇಕು ಸುಖ? ಸುಖ ಬೇಕಿದ್ದರೆ ಸೈನ್ಯಕ್ಕೆ ಸೇರುತ್ತಿದ್ದೆನೇ? ಅದು ಬೇಕಾದ ವನು ಸಾವಿನೊಡನೆ ಆಟಕ್ಕೆ ಹೋಗುವುದಿಲ್ಲ. ಬದುಕುವುದಕ್ಕೆ ಅಪೇಕ್ಷಿ ಸುತ್ತಾನೆ. ಸುಖ, ಶಾಂತಿ, ಗೌರವ ಇದರ ಅಪೇಕ್ಷೆ ಆ ದಿನವೇ ಸತ್ತು ಹೋಯಿತು. ಅದು ಈ ಮನೆಯಲ್ಲಿಯೇ ಸತ್ತು ಹೋಯಿತು. ಆ ದಿನ ಅಷ್ಟೊಂದು ಚುಚ್ಚಿ ನುಡಿದುದೂ ಅಲ್ಲದೆ, ಅವರೆಲ್ಲ ಮನೆಗೆ ಬಂದಾಗ ನನ್ನನ್ನು ಊಟಕ್ಕೆ ನಿಲ್ಲೂ ಎಂದು ಹೇಳುವ ಬಾಯಿಯೂ ಇಲ್ಲದೆ ಹೋಯಿತು. ನಿನ್ನ ತಾಯಿಯು ಸಹ ಒಂದು ಮಾತನ್ನು ಹೇಳಲಿಲ್ಲ. ಏತಕ್ಕೆ? ನಾನು ಭಿಕಾರಿ ಶೇಷಗಿರಿಯ ಮಗನೆಂದು!

ಶ್ರೀಮತಿ—ನಾನೆಷ್ಟು ಆ ದಿನ ವ್ಯಥೆ ಪಟ್ಟೆಲ್ಲ! ಅಣ್ಣನನ್ನು ಅಮ್ಮ ನನ್ನು ಆ ದಿನ ಬೈದಿಲ್ಲಾ!

ಲಕ್ಷ್ಮಣ— ಶ್ರೀ, ನಿನ್ನ ಮನಸ್ಸು ನನಗೆ ತಿಳಿಯದೇ? ಈ ಮನೆ ಯಲ್ಲಿ ಯಾರಾದರೂ ನನಗೆ ಮರ್ಯಾದೆ ಕೊಟ್ಟಿದ್ದರೆ ಅದು ನೀನು ಮತ್ತು ಸದಾಶಿವ. ಆ ಋಣ ನನಗೆ ಎಂದೂ ಮರವೆಯಾಗದು. ಅದರ ನೆನಪಿನಿಂದಲೇ ನಾನು ಇಲ್ಲಿಗೆ ಬಂದುದು. ಇಲ್ಲವಾದರೆ ಇಲ್ಲಿಗೆ ಕಾಲಿರಿ ಸುತ್ತಿದ್ದಿಲ್ಲ.

ಶ್ರೀಮತಿ— ನಿಜ.

ಲಕ್ಷ್ಮಣ—ಆ ದಿನ ನೋಡು ಶ್ರೀಮತಿ, ನನ್ನಲ್ಲಿ ಅಪೂರ್ವವಾದ ದ್ವೇಷ ಉಂಟಾಯಿತು. ಮನಸಿನಲ್ಲಿ ಸೇಡನ್ನು ಹೊತ್ತು ದಿವಸ ದಿವಸ ದಿವಸಗಳನ್ನು ಕಳೆದೆ. ಈ ಹೊತ್ತಿಗೆ ನನ್ನ ಸೇಡು ಸಂಪೂರ್ಣವಾಯಿತು.

ಈ ಎಲ್ಲ ದೂರುಗಳಿಗೆ ನಿನ್ನ ಅಣ್ಣ ಎಷ್ಟು ಕಾರಣನೋ, ಡಾಕ್ಟರ ಮನೆಯವರು ಅಷ್ಟೇ ಕಾರಣರೆಂದು ನನಗೆ ಗೊತ್ತು. ಅವನ ಕಿವಿಯನ್ನು ಚುಚ್ಚಿದವರೂ ಅವರೇ. ಅಂದಿನಿಂದ ಹೊಂಚು ಹಾಕಿದ. ಡಾಕ್ಟರ ಮಗ ರಾಜಾರಾಮ ಸೈನ್ಯವನ್ನು ಸೇರಿಕೊಂಡನಲ್ಲಾ? ಅವನ ಸ್ನೇಹ ಗಳಿಸುವುದಕ್ಕಾಗಿ ನಾನು ಅವನಿರುವಲ್ಲಿಗೆ ಹೋದೆ. ಅವನಿಂದಲೇ ಈ ನಂಟುತನದ ಬೀಜ ಬಿತ್ತಿಸಿದೆ. 'ನನ್ನನ್ನು ದೂರಿದ ಇವರೆಲ್ಲಾ, ನಾನು ಕೇಪ್‌ಟನ್‌ನಾದೆ, ನನ್ನ ತಂದೆ ವ್ಯಾಪಾರದಿಂದ ಶ್ರೀಮಂತನಾದ ಎಂಬುದರಿಂದ ತಮ್ಮ ಬಣ್ಣ ಬದಲಾಯಿಸಿದರು. ನಂಟುತನ ಕೋರಿದರು. ಆರು ತಿಂಗಳ ಹಿಂದೊಮ್ಮೆ ಯಾರಿಗೂ ತಿಳಿಯದಂತೆ ನಾನು ಅವರಲ್ಲಿಗೆ ಬಂದೆ. ಅವರೇ ಕರೆಯಿಸಿಕೊಂಡಿದ್ದರು. ಆಗ ಸೀಮಂತಿನಿಯನ್ನು ನನ್ನ ಮುಂದೆ ಒಯ್ಯಾರಕ್ಕಾಗಿ ಓಡಾಡಿಸಿದರು. ನನಗೂ ತುಂಬ ನಗು ಬಂದಿತು. ನಮ್ಮ ಕೆಂಟೋನ್‌ಗಳಲ್ಲಿ ಇಂಥ ಒನಪುಗಾತಿಯರಿಗೆ ಬರಗಾಲವೇ? ಆ ದಿನವೇ ಈ ಉಂಗುರವನ್ನು ನನಗೆ ಕೊಟ್ಟರು. ಆಗಲೀ ಎಂದೆ. ಸುಧಾಕರನ ಸಡ್ಡಕನಾಗುವ ಸೇಡು ಸಾಧಿಸಿತು. ತಂತಿ ಕೊಟ್ಟು ಕರೆಯಿಸಿದರು. ಬಹಳ ತ್ವರೆಯಿಂದ ರಜಿಸ್ಟರ್ಡ್ ಲಗ್ನವೂ ಆಯಿತು. ಮದುವೆಗೆ ಹಳೆಯವರ ಹಾಗೆ ಜಾತಕ ಕೂಡಬೇಕೆಂದಿಲ್ಲ. ಹೊಸಬರ ಹಾಗೆ ಮನಸ್ಸು ಕೂಡಬೇಕೆಂದಿಲ್ಲ. ಅಂತೂ ಮದುವೆ ಆಯಿತು.

ನನ್ನಂತಹನಿಗೆ ಅಥವಾ ನನ್ನಂತೆ ಸೈನ್ಯದಲ್ಲಿ ಸುತ್ತಾಡುವ ಜನಕ್ಕೆ ಪ್ರೀತಿ ಎಷ್ಟು ಬೇಕು? ಅನಿಶ್ಚಿತವಾದ ಬಾಳ್ವೆಯಲ್ಲಿ ತೇಲಾಡುವಾಗ ತಾತ್ಕಾಲಿಕವಾದ ಸಹವಾಸ, ಶೃಂಗಾರ, ಕಾಮುಗಳೇ ನಮಗೆ ತೃಪ್ತಿಯನ್ನು ಕೊಡುತ್ತವೆ. ನಮ್ಮಂಥವರ ಸಲುವಾಗಿ ಕುಣಿಯುವ ಬೆಲೆವೆಣ್ಣುಗಳು ಇದ್ದೇ ಇರುತ್ತಾರೆ. ಅವರ ಸಂಪರ್ಕದಲ್ಲಿ ನಮ್ಮ ಬಾಳ್ವೆಗೊಂದು ಚೆಲುವೂ, ಉದ್ದೇಶವೂ ಎರಡೂ ಹೊರಟು ಹೋಗಿರುತ್ತದೆ. ಅದಕ್ಕಾಗಿ ನಾನು ನಿನಗೆ ತಕ್ಕವನಲ್ಲವೆಂದು ತಿಳಿದಿದ್ದೇನೆ.

ಶ್ರೀಮತಿ—ನಿಮ್ಮ ಮಿಲಿಟ್ರಿ ಜೀವನದ ವಿಚಾರವನ್ನು ನನ್ನೊಡನೆ ಯಾಕೆ ಹೇಳುತ್ತೀಯಾ? ಪ್ರಸಂಗ ಬಂದಿದ್ದರೆ ಅದನ್ನೂ ನಾನು ಮರೆಯುತ್ತಿದ್ದೆ.

ಲಕ್ಷ್ಮಣ— ನೀನು ಹಾಗೆ ಮರೆಯಬಾರದೆಂದೇ ಹೇಳಿದ್ದು. ನಿನ್ನ ತಂದೆಯವರು ಉಪಾಯ ಕಾಣದೆ ರಾಜಾರಾಮನಿಗೆ ನಿನ್ನನ್ನು ಕೊಡುವ ಪ್ರಯತ್ನ ಮಾಡಬಹುದು. ಮಾಡಿದ್ದಾರೆಂದೂ ಕೇಳಿದೆ. ಅವನ ಮನಸ್ಸಿನಲ್ಲಿಯೂ ಅಂಥ ಅಪೇಕ್ಷೆ ಇದೆ. ಆದುದರಿಂದಲೇ ಇದನ್ನೆಲ್ಲ ಅನ್ನುತ್ತಿದ್ದೇನೆ. ಅವನ ಗುಣ ನನಗೆ ಚೆನ್ನಾಗಿ ಗೊತ್ತಿದೆ. ಈಗ ಅವನೂ ನನ್ನಂತೆಯೇ ವಿಶ್ವ ಸಂಸಾರಿ. ನಾನು ಸೇಡಿಗೆ ಲಗ್ನದ ಆಟದಲ್ಲಿ ಭಾಗಿಯಾದರೆ ಆತ ವಿಲಾಸಕ್ಕಾಗಿ ಆಗಬಹುದು. ಆದರೆ ನಿನ್ನಂಥವಳಿಗೆ ಅಂಥ ಜೀವನದಿಂದ ತೃಪ್ತಿಯಾಗಲಾರದು. ನಿನ್ನ ಪ್ರೇಮಕ್ಕೆ ಅದಕ್ಕೂ ಹೆಚ್ಚಿನ ಆಸೆ ಇರಬೇಕು. ಸಂಸಾರದ ಮೇಲೆ ಮೋಹ ಬಿದ್ದಿರಬೇಕು. ಅದೊಂದು ವಿಲಾಸ ಎಂದು ತಿಳಿದವರಾಗಿರಬಾರದು.

ಶ್ರೀಮಂತಿ— ಇಷ್ಟೆಲ್ಲ ಹೇಳುತ್ತೀಯಲ್ಲಾ ಲಕ್ಷ್ಮಣ. ನಿನ್ನ ಸೇಡೆಲ್ಲ ಸರಿಯಾದುದೇ ಆದರೆ ಆ ಸೇಡಿಗೆ ತಿಳಿಯದ ಒಂದು ಹುಡುಗಿಯನ್ನು ಬಲಿಕೊಡುತ್ತೀಯಾ? ಸುಧಾ ತಪ್ಪು ಮಾಡಿರಬಹುದು. ಸುಲೋಚನಾಬಾಯಿ ಮಾಡಿರಬಹುದು. ನಮ್ಮ ಮನೆಯವರೂ ಮಾಡಿರಬಹುದು. ಆದರೆ ಆ ಸೇಡಿನ ಪರಿಣಾಮ ಬಡ ಆ ಸೀಮಂತಿನಿಯ ಮೇಲಾಗಲಿಲ್ಲವೇ? ನಿನ್ನಂಥವನು ಈ ಕೆಲಸ ಮಾಡುವುದೇ?

ಲಕ್ಷ್ಮಣ—ನನ್ನಂಥವ ಏನು ದೊಡ್ಡ ಪ್ರಾಣಿಯೆಂದು ತಿಳಿದೆ? ನನ್ನ ಗುಣ, ಕುಲ ನೋಡಿ ಅವರು ಹುಡುಗಿಯನ್ನು ಕೊಟ್ಟರೇ? ನನ್ನ ಸಂಬಳ ಕೆಪ್ಟನ್ ಪದವಿ ನೋಡಿ ಕೊಟ್ಟರು. ಅವಳಿಗೂ ನನ್ನ ಮಿಲಿಟ್ರಿ ಉಡುಗೆಯನ್ನು ನೋಡಿ ಭ್ರಮೆ ಆಯಿತು. ಒತ್ತಾಯ ಮಾಡಿ ಮನೆಗೆ ಕರೆದು ಹೇಳಿದರು. ನನ್ನ ಸೇಡಿಗೆ ಒಂದು ಅವಕಾಶವಾಯಿತೆಂದು ನಾನು ಒಪ್ಪಿದೆ. ಅವಳಿಗೆ ಪ್ರಿಯವಾಗಿದ್ದುದು ಶೃಂಗಾರದ ನಾಟಕ. ಅವಳು ಒಳ್ಳೆಯವಳೋ, ಕೆಟ್ಟವಳೋ ನನಗೆ ತಿಳಿಯದು. ಶ್ರೀಮಂತಿ, ಇದರಿಂದ ಎರಡು ಮನೆಯವರ ಸೇಡೂ ಪೂರೈಸಿದ ಹಾಗಾಯಿತು. ಇದೇ ನನ್ನ ದುಷ್ಟ ಸಂತೋಷ. ನಿನ್ನ ಋಣ ಮಾತ್ರ ಎಷ್ಟು ಮಾಡಿದರೂ ಮುಗಿಯದು.

ಶ್ರೀಮಂತಿ— ಎರಡು ಮನೆಯವರ ಸೇಡೆಂದರೆ?

ಲಕ್ಷ್ಮಣ—ನಿಮ್ಮ ಮನೆಯವರು ತೋರಿಸಿದ ಅನಾದರದ ವಿಷಯದಲ್ಲಿ. ಅಷ್ಟೂ ಹೊಳೆಯಲಿಲ್ಲವೇ ನಿನಗೆ? ನನ್ನ ತಂದೆಯಿಂದ ಸಾಲ ಕೊಡಿಸಿದ ಕತೆ ನಿನಗೆ ಗೊತ್ತಿಲ್ಲವೇ?

ಶ್ರೀಮತಿ—ಅದು ಸೇಡೇ?

ಲಕ್ಷ್ಮಣ—ಸೇಡಲ್ಲದೆ ಮತ್ತೇನು. ಉಪಕಾರವೇ? ನಾನು ಭಿಕಾರಿಯ ಮಗನೆಂದು, ಎಂದಾದರೂ ನಿನ್ನ ಗಂಡನಾದೇನೆಂದು ಹೆದರಿ ಹೊರಗೆ ಹಾಕಿದವರಲ್ಲವೇ? ಅವರಿಗೂ ಸಾಲವಾಗಿ ಬಡತನದ ಅನುಭವ ಆಗಲಿಲ್ಲವೇ? ಆಗ ತಂದೆಗೆ ಹೇಳಿ ಸಾಲ ಕೊಡಿಸಿದವನು ನಾನು. ಮರ್ಯಾದೆಯ ಕಲ್ಪನೆ ಇದ್ದರೆ ಅದಕ್ಕೆ ಕೈ ಒಡ್ಡುತ್ತಿದ್ದರೆ? ತಾವು ಆಡಿದ ಮಾತನ್ನು ತಾವೇ ನುಂಗುವ ಗಳಿಗೆ ಬಂದಿತಲ್ಲಾ?

ಶ್ರೀಮತಿ—ನಿನಗೆ ಆ ದಿನ ನನ್ನ ತಂದೆ-ತಾಯಿ ದೂರಿದ ಮಾತೇ ನೆನಪಲ್ಲವೇ? ಅವರು ಹಿಂದಾದುದನ್ನು ಮರೆತು ಬಿಡು ಅನ್ನಲಿಲ್ಲವೇ?

ಲಕ್ಷ್ಮಣ—ಅಂದರು. ಅದೆಲ್ಲ ಸದಾಶಿವನ ದಾಕ್ಷಿಣ್ಯಕ್ಕೆ. ಅವರಿಗೆ ನನ್ನ ಮೇಲೆ ಗೌರವ ಇದ್ದೇ ಇರಲಿಲ್ಲ. ನಾನು ಬಡವನೂ, ಭಿಕಾರಿಯ ಮಗನಾದರೂ ಅವರೆಲ್ಲ ನನ್ನನ್ನು ತಮ್ಮ ಜವಾನನಂತೆ ತಿಳಿದರು. ಅದೇ ಜವಾನ ತಮ್ಮ ಅಳಿಯನಾಗುವುದಕ್ಕೆ ಜೇಡಿ ಬರೆಯಲು ನಾಚಿಕೆಯೂ ಆಗಲಿಲ್ಲ.

ಶ್ರೀಮತಿ—ಆ ಸಿಟ್ಟು ನನ್ನ ಮೇಲೆಯೋ?

ಲಕ್ಷ್ಮಣ—ಶ್ರೀಮತಿ, ಹಾಗೆನ್ನಬೇಡ. ನಿನ್ನನ್ನು ದೇವರ ಹಾಗೆ ಪೂಜಿಸುತ್ತಿದ್ದೇನೆ ನಾನು. ನಿನ್ನ ಗಾಢವಾದ ಪ್ರೀತಿಗೆ ನಾನು ತಕ್ಕವನಲ್ಲ. ನೀನು ನನಗಾಗಿ ಮನೆಯವರೊಡನೆ ಕಟ್ಟಿಕೊಂಡ ನಿಷ್ಠುರತೆಗೆ ನಾನು ಎಂದೆಂದಿಗೂ ಋಣಿ. ನಿನ್ನದು ತೀರ ಸರಳ ಮನಸ್ಸು. ಈ ಸೇಡು ನನ್ನ ಮನಸ್ಸಿನಲ್ಲಿ ಹಾಯದೆ ಇರುತ್ತಿದ್ದರೆ, ನಿನ್ನ ಸ್ನೇಹ, ಪ್ರೀತಿಗಳೆರಡೂ ಪೂಜ್ಯವಾಗುತ್ತಿದ್ದವು ಆದರೆ ಸೇಡಿಗೆ ಇಳಿದು ಸೈನ್ಯವನ್ನು ಸೇರಿ ಈ ಎಲ್ಲ ವಿಪರೀತ ಜೀವನವನ್ನು ತೊಡಗಿದ ಮೇಲೆ ನಿನಗೆ ಎಂದೂ ತಕ್ಕವನಲ್ಲ. ಕುಡಕತನ, ಇಲ್ಲದ ದುರ್ವ್ಯಸನಗಳಲ್ಲಿ ಬಲಿಬಿದ್ದ ನಾನು, ನನ್ನ ಶೀಲವನ್ನು ಗಾಳಿಗೆ ಎಸೆದಿದ್ದೇನೆ ಎಂದು ಚೆನ್ನಾಗಿ ಗೊತ್ತು. ಅದರ ಪವಿತ್ರತೆ ಉಳಿಸಿಕೊಂಡಿಲ್ಲ. ಅದೆಲ್ಲವನ್ನು ತಿಳಿಯಬೇಡದವರಿಗೆ ನಾನು

ಒಪ್ಪಬಹುದು. ಆದರೆ ನಿನ್ನ ವಿಷಯದಲ್ಲಿಯೂ ನಾನು ನನ್ನ ಬದುಕನ್ನು ಮುಚ್ಚಿಟ್ಟರೆ ಹೇಗೆ?

ಶ್ರೀಮತಿ—( ತಿರುಗಿ ಅಳುವಳು. )

ಲಕ್ಷ್ಮಣ—ಅಳಬಾರದು ಶ್ರೀ. ನನ್ನ ತಪ್ಪಿಗಾಗಿ ನೀನು ಅಳಬೇಕೇ? ನನ್ನ ಅಪರಾಧಕ್ಕಾಗಿ ಕ್ಷಮಿಸು. ನಿನ್ನನ್ನು ತುಂಬ ನಿರಾಶೆಗೊಳಿಸಿದ್ದೇನೆ. ನಿನ್ನ ಪ್ರೇಮ ಮೊದಲೇ ತಿಳಿದಿದ್ದರೆ ಈ ವಿಪರೀತದ ದಾರಿಯನ್ನು ಎಂದೂ ಹಿಡಿಯುತ್ತಿರಲಿಲ್ಲ. ಈಗ ಹಿಂದೆ ಬಾರದ ಪಯಣ ನನ್ನದು. ಕಲುಷಿತ ಜೀವನ ನನ್ನದು.

ಯಾಕೆ ಇನ್ನೂ ನನ್ನ ವಿಷಯದಲ್ಲಿ ನಿನಗೆ ಅಭಿಮಾನ ಉಳಿದಿದೆಯೇ?

ಶ್ರೀಮತಿ—ನಿನ್ನ ವಿಷಯವಾದ ಅಭಿಮಾನವನ್ನು ನಾನು ಎಂದು ಕಳಕೊಳ್ಳುವೆನು? ನಿನ್ನ ಸ್ಥಿತಿಯಲ್ಲಿ ನಾನಿದ್ದಿದ್ದರೆ ಅವರ ಚುಚ್ಚು ನುಡಿಗಳನ್ನು ಕೇಳಿ ಹೀಗೆಯೇ ಸೇಡು ತೀರಿಸುತ್ತಿದ್ದೆನೋ ಏನೋ, ಯಾರು ಬಲ್ಲರು? ನನಗೀಗ ನನ್ನ ಭವಿಷ್ಯವನ್ನು ನೆನೆದು ದುಃಖ ಬರುತ್ತದೆ.

ಲಕ್ಷ್ಮಣ— ಶ್ರೀಮತಿ, ನಿನಗೆ ಏತರ ಚಿಂತೆ? ನಿನ್ನ ಗುಣಕ್ಕೆ, ಯೋಗ್ಯತೆಗೆ, ಯೋಗ್ಯ ಪತಿ ದೊರೆತಾನು. ಅವನು ಬಡವನೇ ಇರಲಿ, ಶ್ರೀಮಂತನೇ ಇರಲಿ. ನಿನ್ನ ತ್ಯಾಗ ಪ್ರೇಮಗಳಿಂದ ಆತ ಸುಖಿಯಾದಾನು.

ಶ್ರೀಮತಿ—ಅಷ್ಟೆಯೆ ನೀನು ಅನ್ನುವ ಮಾತು! ಲಕ್ಷ್ಮಣ ನನಗೆ ಇನ್ನು ವಿವಾಹವೇಕೆ?

ಲಕ್ಷ್ಮಣ—ಅದು ಕೊಡುವ ಸುಖವಿದೆ ಎನ್ನುವುದರಿಂದ. ನನ್ನಂಥವರಿಗೆ ಅದು ನಾಲ್ಕು ಗಳಿಗೆಯ ಕಾಮದ ಆಟವಾಗಿದೆ. ನೀನು ಅಂಥವಳಲ್ಲ. ನಿನ್ನ ಪ್ರೀತಿ ವಿಶ್ವಾಸಗಳು ಬೆಳೆಯುವ ಗಿಡವಾಗಿದೆ. ವಿವಾಹದಿಂದ ಅದು ನಾಲ್ಕು ಮಕ್ಕಳಿಗೆ ಸಲಹಬೇಕು. ಅದರಿಂದ ನಿನಗೂ ಹಿಗ್ಗಿದೆ, ಹಿತವಿದೆ.

ಶ್ರೀಮತಿ—ನೀನು ಏನನ್ನುತ್ತೀಯಾ ನನಗೆ ತಿಳಿಯದು.

ಲಕ್ಷ್ಮಣ— ನನಗೆ ತಿಳಿಯುತ್ತದೆ. ಎಳೆತನದಿಂದ ನಿನ್ನ ಮನಸ್ಸನ್ನು ತಿಳಿದಿದ್ದೇನೆ ನಾನು ದೊಡ್ಡ ಸಂಸಾರವೇ ಉಂಡು ಸುಖಿಸಬೇಕಾದ ಪ್ರೀತಿ ನಿನ್ನದು. ಹೋಗಲಿ ತಂಗಿ.

ಶ್ರೀಮತಿ—ನಾನೇನನ್ನುವುದು ಲಕ್ಷ್ಮಣ ?

ಲಕ್ಷ್ಮಣ—ನನ್ನನ್ನು ಮನ್ನಿಸಿದ್ದೇನೆ ಅನ್ನು. ಈ ಹಾವನ್ನು ಕ್ಷಮಿಸಿದ್ದೇನೆ ಅನ್ನು. ಸಂತೋಷದಿಂದ ಹೋಗುತ್ತೇನೆ. ಸಾಕು ನನಗೆ ಗೊತ್ತು, ಈ ಸಾರಿ ನಾನು frontಗೆ ಹೋದರೆ ಹಿಂದೆ ಬರುವುದಿಲ್ಲವೆಂದು. ಬರುವ ಇಷ್ಟವೂ ನನಗೆ ಇಲ್ಲ.... ಶ್ರೀ, ನಿನ್ನ ಫೋಟೋ ಇದೆಯೇ ?

ಶ್ರೀಮತಿ—ಯಾಕೆ ಲಕ್ಷ್ಮಣ ? ನನ್ನ ಚಿತ್ರ, ಜೀವನ ಎರಡೂ ನಿನಗೆ ಬೇಕಾಗಿಲ್ಲದಾಗ ?

ಲಕ್ಷ್ಮಣ— ವಯಸ್ಸಿನಲ್ಲಿ ತಂಗಿಯಾದ, ಪ್ರೀತಿಯಲ್ಲಿ ತಾಯಿಯಾದ ನಿನ್ನ ಚಿತ್ರ ನನಗೆ ಬೇಕು. ತೀರ ಅನುಶಕ್ತಿಯಿಂದ ಮಾತನಾಡುತ್ತೇನೆಂದು ತಿಳಿಯಬೇಡ. ನಾನು ಈ ಸಮರೂಪದಲ್ಲಿ ಸಾಯುವ ಗಳಿಗೆ ಬಂದಾಗ ನನ್ನ ಎದೆಯ ಮೇಲೆ ಆ ಚಿತ್ರವಿರಬೇಕು.

ಶ್ರೀಮತಿ — ( ಇನ್ನಷ್ಟು ದುಃಖಿಸುತ್ತಾ ) ಲಕ್ಷ್ಮಣಾ, ಸಾಯುವ ಮಾತನ್ನು ನುಡಿಯಬೇಡ. ಬದುಕಿ ದೊಡ್ಡವನಾಗು. ನನ್ನನ್ನು ಮದುವೆಯಾಗಲು ಬರಲಿಲ್ಲವೆಂದು ಸಾಯಬೇಕೇ ? ನಾನು ಬಲೆ ನಿನ್ನ ಸಿಟ್ಟು, ಸೇಡನ್ನು. ಅದಕ್ಕೆ ಸಾವೇಕೆ ? ಯಾರೂ ಸಾಯಬಾರದು.

ಲಕ್ಷ್ಮಣ— ಹಾಗಿದ್ದರೆ ಸಾವಿನ ಮಾತು ಇಬ್ಬರಿಗೂ ಸಮನೇ. ನೀನು ನನ್ನನ್ನು ಮರೆಯಬೇಕು. ನನ್ನಿಂದಾದ ನಿರಾಶೆಯನ್ನು ಮರೆಯಬೇಕು. ಅದರಿಂದ ಯಾವ ವಿಪರೀತ ಮಾರ್ಗವನ್ನು ಕೈಕೊಳ್ಳುವುದಿಲ್ಲವೆಂದು ಭರವಸೆ ಕೊಡಬೇಕು.

ಶ್ರೀಮತಿ—ನನಗೆ ಬಾಯಿ ಬಾರದ ಗಳಿಗೆಯಲ್ಲಿ ಹೀಗೇಕೆ ಮಾತನಾಡಿಸುತ್ತಿದ್ದೀಯಾ ? ನೀನು ನನ್ನ ಅಣ್ಣನಾಗಿಯೇ ಬಾಳಿರು. ನನ್ನನ್ನು ದೇವರಂತೆ ಕಂಡಿದ್ದೀಯ. ನನಗೆ ಆ ಪ್ರೀತಿ ಸಾಕು. ನಿನ್ನ ಋಣ ಅದರಿಂದಲೇ ಪರಿಹಾರವಾಯಿತು. ನನಗೆ ಬೇಕಾದುದು ಇಷ್ಟೆ. ನನಗಿಂತ ಆ ಇನ್ನೊಬ್ಬಳು ಹೆಚ್ಚಿನವಳೆಂದು ಕಾಣಿಸಲಿಲ್ಲವೆಂಬ ಸಂತೋಷ. ಏನು ಕಾರಣಕ್ಕೆ ದೇವರು ನನ್ನನ್ನು ಹುಟ್ಟಿಸಿದನೋ ಯಾರು ಬಲ್ಲರು ? ನನ್ನ

ಬದುಕಿನಿಂದ ಹೆರವರ ಮೂರ್ಖತೆ ಹೋಗುವುದಾದರೆ ಹೋಗಲಿ. ಇನ್ನೊಬ್ಬರ ಜೀವನಕ್ಕೆ ಬೆಳಕು ಸಿಗುವುದಾದರೆ ಸಿಗಲಿ.

ಲಕ್ಷ್ಮಣ—ಅಷ್ಟು ಮಾಡದ ಬದುಕಿನಲ್ಲಿ ಏನಿದೆ ಹೇಳು ?

ಸದಾ—( ಪ್ರವೇಶಿಸುವನು. ) ಲಕ್ಷ್ಮಣ !

ಲಕ್ಷ್ಮಣ—( ಬಂದು ) ಏನು ಸದಾ, ಬಾ, ಬಾ. ನಮ್ಮ ಮಾತು ಮುಗಿಯಿತು. ಎಲ್ಲ ವಿಚಾರಗಳೂ ಸಮಾಧಾನದಿಂದ ಮುಗಿದಂತಾಯಿತು.

ಸದಾ—ನಿಜವೇ ?.. ಅಣ್ಣ ಬಂದಿದ್ದಾನೆ. ಹೊರಗೇನೇ ನಿಂತಿದ್ದಾನೆ.

ಲಕ್ಷ್ಮಣ—ಕರೆ ಅವನನ್ನು. ಬೇಡ ನಾನೇ ಕರೆದು ತರುತ್ತೇನೆ.

ಸದಾ— ನಾನು ಕರೆಯಲು ಹೋದೆ; ಬರಲಿಲ್ಲ. ಈ ತಂತಿಯನ್ನು ಕೊಟ್ಟ.

ಲಕ್ಷ್ಮಣ— ತಂತಿಯೇ ? ನೋಡುವ. ( ಅದನ್ನು ಕೈಯಲ್ಲಿ ಹಿಡಿದು ನೋಡುತ್ತ ಸುಧಾಕರನನ್ನು ಕರೆದುಕೊಂಡು ಬರಲು ಹೋಗುವನು. )

ಸದಾ—ಲಕ್ಷ್ಮಣ ಏನು ಹೇಳಿದ ?

ಶ್ರೀಮತಿ—ಅದೊಂದು ದೊಡ್ಡ ಪುರಾಣವೇ. ಆಮೇಲೆ ಹೇಳುತ್ತೇನೆ.

( ಲಕ್ಷ್ಮಣನು ಸುಧಾಕರನನ್ನು ಕರೆದು ತರುತ್ತಾನೆ. )

ಲಕ್ಷ್ಮಣ—ಬಾ ಸುಧಾ, ಕುಳಿತಿರು.

ವಸಂತಿ— ( ಕೈಯಲ್ಲಿ ಕಾಫಿ ಮತ್ತು ತಿಂಡಿಯನ್ನು ಹಿಡಿದುಕೊಂಡು ತರುತ್ತಾಳೆ, ಅದನ್ನು ಅವರ ಮುಂದಿರಿಸಿ ) ಸುಧಾ, ಬಂದೆಯಾ ಮಗು ! ಕಾಫಿ ತೆಗೆದುಕೋ.

ಸುಧಾ—ಕಾಫಿ ಬೇಡ, ಕುಡಿದೇ ಬಂದಿದ್ದೇನೆ.

ಲಕ್ಷ್ಮಣ— ತಕ್ಕೊಳ್ಳಯ್ಯಾ ! ಇಂಥ ಒಳ್ಳೆಯ ಸಂದರ್ಭದಲ್ಲಿ ತಕ್ಕೊಳ್ಳದೆ ಇನ್ನು ಯಾವಾಗ ?—ಅಮ್ಮಾ ನನ್ನ ಲಗ್ನವಾಯಿತು.

ವಸಂತಿ—ಲಗ್ನವಾಯಿತು !

ಲಕ್ಷ್ಮಣ-- ಏನು ಸುಧಾ, ಹೇಳಲೇ ಇಲ್ಲವೇ ಇವರಿಗೆ, ನನ್ನ ಸೀಮಂತಿನಿಯ ಲಗ್ನದ ವಿಚಾರ ? ಅಮ್ಮಾ, ನಿನ್ನೆ ನನಗೂ ಅವಳಿಗೂ

ರಜಿಸ್ಟರ್ಡ್ ಮದುವೆ ಆಯಿತು. ಹೇಗನಿಸುತ್ತದೆ ನಿಮಗೆ ?—ನಾನು ಅದನ್ನೇ ಅನ್ನುತ್ತಿದ್ದೆ ಶ್ರೀಮತಿಗೆ. ಎಷ್ಟೆಂದರೂ ಸಂತೋಷದ ಸಂಗತಿ ಅಲ್ಲವೇ ? ಯಾವ ಭಿಕಾರಿಯನ್ನು ತಮ್ಮ ತಂಗಿಗೆ ಬೇಡವೆಂದರೋ ಅವನನ್ನು ತನ್ನ ನಾದಿನಿಗೆ ಕೊಟ್ಟು ಲಗ್ನ ಮಾಡಿಸಿದರು. ನನ್ನ ಪಾಲಿಗೆ ಅಪೂರ್ವ ಆನಂದ.

ಸುಧಾ — ( ನಿಂತುಬಿಡುತ್ತಾನೆ. ) ಏನು Insult ಮಾಡುತ್ತೀಯಾ ನನಗೆ ?

ಲಕ್ಷ್ಮಣ—ಕೂತುಕೊಳ್ಳಯ್ಯಾ. ಹಿಂದೆ ಆಡಿದ ಮಾತು ನೆನಪಿಗೆ ಬಂದುಬಿಟ್ಟಿತು. ಆಡಿದೆ. ಒಂದು ಕಪ್ ಕಾಫಿ ಕುಡಿದು ಎಲ್ಲವನೂ ಮರೆತು ಬಿಡುವ. ( ತಂತಿಯನ್ನು ತೆಗೆದು ಬಿಡಿಸಿ ಓದುತ್ತ ) Report yourself to the basecane. ಸರಿ ಆಯಿತು. ಅಂದರೆ next ಬಸ್ಸಿಗೇ ಹೊರಡಬೇಕಾಯಿತಲ್ಲಾ. ಇನ್ನೆಲ್ಲಿದೆ ವೇಳೆ ? ಶ್ರೀಮತಿ, ಸದಾಶಿವ, ಅಮ್ಮ ಇನ್ನು ಎಂದು ಕಾಣುವುದೋ! ಅದೂ ಕಂಡರೆ. ನನ್ನ ತಪ್ಪಿದ್ದರೆ ಮನ್ನಿಸಬೇಕು. (ಅವಸರದಲ್ಲಿ ಹೊರಡುತ್ತಾನೆ. )

ಸುಧಾ—ಇದೆಲ್ಲಾ ಏನು ಕತೆ ?

ಶ್ರೀಮತಿ—( Photo ಹಿಡಿದುಕೊಂಡು ಬರುವಳು. ) ಲಕ್ಷ್ಮಣ, ಲಕ್ಷ್ಮಣ ! ಇದೊ Photo.

ಲಕ್ಷ್ಮಣ—(ಹಿಂದಿರುಗಿ) Thanks. ( Photo ತೆಗೆದುಕೊಂಡು ) ಇದು ಅಮ್ಮ ನನ್ನ ದೇವತೆಯ Photo. ನಾನು ಸಾಯುವಾಗ ಇದನ್ನು ನನ್ನ ಎದೆಯಲ್ಲಿರಿಸಿಕೊಂಡು ಸಾಯಬೇಕೆಂದಿದ್ದೇನೆ. ( ಥಟ್ಟನೆ ಅವಳ ಕಾಲಿಗೆ ಬಿದ್ದು ನಮಸ್ಕರಿಸಿ ಹೊರಟು ಹೋಗುತ್ತಾನೆ. ಸುಧಾ ತಬ್ಬಿಬ್ಬಾಗಿ ಅವನನ್ನು ಹಿಂಬಾಲಿಸುತ್ತಾನೆ. )

ವಸಂತಿ—ಅಯ್ಯೋ! ಇದೆಲ್ಲಾ ಏನು ಸಂಗತಿ ?

ಶ್ರೀಮತಿ—( ಅಲ್ಲೇ ಚೀರಿ ಕುಳಿತುಬಿಡುತ್ತಾಳೆ. ಸದಾಶಿವ ಅವಳ ಬಳಿಗೆ ಹೋಗಿ ಹಿಡಿದು ಉಪಚರಿಸುತ್ತಾನೆ.)

ಶಂಕರ— ( ಓಡಿ ಬಂದು ) ಯಾರು ಕೂಗಿದ್ದು ? ಏನಾಯಿತೀಗ ?

ಲಕ್ಷ್ಮಣ ಏನು ಹೇಳಿದ ? ಸುಧಾಕರ ಬಂದದ್ದೇನು ? ಅವನಿಗೆ ಈ ಮನೆಗೆ ಬರುವ ಧೈರ್ಯ ಬಂತೇ ?

ಶ್ರೀಮತಿ—( ಚೇತರಿಸಿ ) ಲಕ್ಷ್ಮಣ ಹೋದನೇ ? ಒಂದು ಗಳಿಗೆಯಲ್ಲಿ ಎಷ್ಟೆಲ್ಲ ವಿಚಿತ್ರವಾಗಿ ಕಾಣಿಸಿತು ನನಗೆ. ಲಕ್ಷ್ಮಣ ಹೋದ. ಯುದ್ಧಕ್ಕೆ ಕರೆ ಬಂತೆಂದು ಹೋದನಲ್ಲವೇ ? ಅಣ್ಣಾ, ಲಕ್ಷ್ಮಣ, ರಾಮಾಯಣದ ಲಕ್ಷ್ಮಣನಿಗಿಂತ ದೊಡ್ಡವನು ನೀನು. ನಾನು ರಾಮ ಅವನು ಲಕ್ಷ್ಮಣ.

ಸದಾ— ಏನನ್ನುತ್ತೀಯಮ್ಮಾ ? ಏನೇನೆಂದನು ? ಏನು ಹಾಸ್ಯ ಮಾಡಿ ಹೋದನೇ ?

ಶ್ರೀಮತಿ — ಲೀಡರಾ ಲಕ್ಷ್ಮಣನೆಂದ ಮಾತು ! ನಿನ್ನೆ ಸೀಮಂತಿನಿ ಯೊಡನೆ ಅವನ ಲಗ್ನವಾಯಿತಂತೆ. ರಜಿಸ್ಟರ್ಡ್ Marriage ಅಂತೆ. ಸುಧಾಕರನೇನೊ ತಂತಿಯನ್ನು ಹಿಡಿದುಕೊಂಡು ಬಂದ. Report report ಎಂದು ಓದಿದ ಮೇಲೆ ಶ್ರೀಮತಿಯು Photoವನ್ನು ಹಿಡಿದುಕೊಂಡು ಹೋದ

ಶಂಕರ— ನೀನೇನು ಮಾತನಾಡುತ್ತೀಯಾ ? ತಲೆಬುಡವೆ ಇಲ್ಲದ ಪರ ಹಾಗೆ ? ಶ್ರೀಮತಿ ನಿನಗೇನಾದರೂ ಹೇಳಿದನೇ ? ಗೊತ್ತಾಯಿತೇ ?

ಸದ —ಅಪ್ಪಾ, ಅದು ಮಾತಿನಿಂದ ಬಣ್ಣಿಸಲಾಗದ ವ್ಯಥೆ. ತಿಳಿ ವನ್ನು ಹೋಲುವ ಸಂದರ್ಭ.

ಶ್ರೀಮತಿ— ನಿಜ ಅಣ್ಣಾ ! ಇದ್ದು ಬಾಯಿ ತೆರೆಯದೆ ಬದುಕ ಬೇಕಾದ ಭಾಗ್ಯ. ಅಂತೂ ಲಕ್ಷ್ಮಣ ಯಾರಿಗೂ ಸಿಗದಂತೆ ಹೋದ.

